# ಭಕ್ತ ಸಿರಿಯಾಳ ಶೆಟ್ಟಿ

ಜಿ. ವಿ. ದೊಡ್ಡವೀರಪ್ಪ.

ಶ್ರೀ ನೀಲಕಂಠೇಶ್ವರ ಪ್ರಿಂಟಿಂಗ್ ವರ್ಕ್ಸ್,
ಸುಲ್ತಾನ್‌ಪೇಟೆ, ಬೆಂಗಳೂರು ಸಿಟಿ.

1941



ಶ್ರೀ ಸಿರಿಯಾಳ ಸತ್ವಪರೀಕ್ಷೆ

# ಮುನ್ನುಡಿ

ಭರತಖಂಡವು ಪುಣ್ಯಭೂಮಿ. ಪುಣ್ಯ ಪರ್ವತಗಳಿಂದಲೂ, ಪಾವನ ತರವಾದ ಮಹಾ ನದಿಗಳಿಂದಲೂ, ಮೋಕ್ಷದಾಯಕವಾದ ಅನೇಕ ದಿವ್ಯ ಕ್ಷೇತ್ರಗಳಿಂದಲೂ, ಪುಣ್ಯಾಶ್ರಮಗಳಿಂದಲೂ, ಮಹಾಮಹಿಮರಾದ ವಿಭೂತಿ ಗಳಿಂದಲೂ ಘನತೆವೆತ್ತಿರುವ ಈ ದೇಶವು ಅನಾದಿಕಾಲದಿಂದಲೂ ಈಶ್ವರನ ಕ್ರೀಡಾಸ್ಥಾನವಾಗಿರುವುದು. ಸೃಷ್ಟಿಕರ್ತನ ಅನಂತ ಲೀಲೆಗಳಿಗೆ ರಂಗಸ್ಥಳ ವಾಗಿರುವ ಈ ಪುಣ್ಯ ಭೂಮಿಯಲ್ಲಿ ಈಶ್ವರಾಂಶ ಸಂಭೂತರಾದ ಅಸಂ ಖ್ಯಾತ ಮಹಾತ್ಮರು ಅವತರಿಸಿ ತಮ್ಮ ಅಸಾಧಾರಣವಾದ ನಡೆ ನುಡಿ, ಶಕ್ತಿ ಸಾಮರ್ಥ್ಯ, ಭಕ್ತಿ ಜ್ಞಾನಗಳಿಂದ ಅಲೌಕಿಕವಾದ ಅತ್ಯದ್ಭುತವಾದ ಕಾರ್ಯಗಳನ್ನೆಸಗಿ ತಮ್ಮ ವಿಚಿತ್ರ ವರ್ತನೆಗಳಿಂದ ಲೋಕವನ್ನೇ ಬೆರಗುಗೊಳಿಸಿರುವರು. ಬಾಲರಂತೆ ಉನ್ಮತ್ತರಂತೆ ಇದ್ದಂತಹವರೂ, ಸಮಸ್ತವನ್ನೂ ಈಶ್ವರಮಯವಾಗಿ ತಿಳಿದು ಅನುಷ್ಠಾನಕ್ಕೆ ತಂದತಹವರೂ, ಸಪ್ತ ಸಮುದ್ರಗಳನ್ನೂ ಏಕಾಪೋಶನವಾಗಿ ತೆಗೆದುಕೊಂಡತಹವರೂ, ತ್ರಿಮೂ ರ್ತಿಗಳನ್ನು ಹಸುಳೆಗಳಾಗಿ ಮಾಡಿದಂತಹವರೂ ಈ ದೇಶದಲ್ಲಿ ಅನೇಕರು ಆಗಿಹೋಗಿರುವರು. ಅಂತಹ ವಿಭೂತಿಗಳು ನಡೆದುದೇ ನಡೆ, ನುಡಿದುದೇ ನುಡಿ. ಅಂತಹವರ ವರ್ತನೆಗೆ ಬಹಳ ಅಂತರಾರ್ಥಗಳುಂಟೆಂಬುದನ್ನು ಸಂಸ್ಕಾ ರದಿಂದ ತಿಳಿಯಬಹುದು.

ಊರ್ಧ್ವ ಲೋಕ ವಾಸಿಗಳಾದ ದೇವತೆಗಳೇ ಮೊದಲಾದವರು ಈ ಪ್ರಪಂಚದಲ್ಲಿ ವಿಭೂತಿಗಳಾಗಿ ಜನ್ಮವೆತ್ತುವರೆಂದು ಆಸ್ತಿಕರೆಲ್ಲರೂ ನಂಬಿರುವರು. ಅವರು ಹಾಗೆ ಜನ್ಮವೆತ್ತಿ ಬರಲು ಎರಡು ತರದ ಕಾರಣ ಗಳನ್ನು ಹೇಳಬಹುದು. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ನ್ಯಾಯದಂತೆ ಈಶ್ವರ ಸಾಮೀಪ್ಯದಲ್ಲಿರುವ ಮಹಿಮನ ಪುಣ್ಯಫಲವು ತೀರಿದ ಮೇಲೆ ಕಾರಣಾಂತರದಿಂದ ಯಾವುದಾದರೊಂದು ಶಾಪಕ್ಕೊಳಗಾಗಿ ಭೂ ಲೋಕದಲ್ಲಿ ಜನ್ಮವೆತ್ತುವನು ಎಂಬುದು ಒಂದುಭಾವನೆ. ಭೂ ಲೋಕದಲ್ಲಿ

ದುಷ್ಟರು ಹೆಚ್ಚಿ ಧರ್ಮಗ್ಲಾನಿಯಾದಾಗ ಆ ದುಷ್ಟರನ್ನು ನಿಗ್ರಹಿಸಿ ಧರ್ಮ ಸಂಸ್ಥಾಪನೆ ಮಾಡುವುದಕ್ಕಾಗಿ ಈಶ್ವರನಾಗಲೀ, ಈಶ್ವರನಿಂದ ಆಜ್ಞಪ್ತರಾದ ವರಾಗಲೀ ಮರ್ತ್ಯ ಲೋಕದಲ್ಲಿ ಅವತರಿಸುವರೆಂಬುದು ಮತ್ತೊಂದುಭಾವನೆ. ಅಂತಹ ವಿಭೂತಿಗಳ ಜೀವನ ವೈಚಿತ್ರ್ಯಗಳನ್ನು ಅರಿತುಕೊಳ್ಳುವುದು ಈಶ್ವರ ವಿಚಾರವನ್ನು ಅರಿತು ಕೊಳ್ಳುವಷ್ಟೇ ಕಷ್ಟಸಾಧ್ಯವಾದುದು. ಭಕ್ತರಜೀವನದ ಅಂತರಾರ್ಥವನ್ನು ತಿಳಿದುಕೊಳ್ಳುವುದಕ್ಕೆ ಮುಖ್ಯಸಾಧನವು ಮೇಲಿಂದ ಮೇಲೆ ಅಂತಹ ವಿಭೂತಿಗಳ ಚರಿತ್ರೆಯನ್ನು ಓದಿ ಮನನ ಮಾಡುವುದೇ ಆಗಿದೆ. ಅಂತಹ ಮಹಾ ಸಾಧನೆಯ ಕಡೆಗೆ ಸಿರಿಯಾಳ ಶೆಟ್ಟಿಯ ಚರಿತ್ರೆಯನ್ನು ವಸ್ತುವಾಗಿ ಉಳ್ಳ ಈ ಕೃತಿಯೂ ಒಂದು ಸಣ್ಣ ಪ್ರಯತ್ನ.

ಸಿರಿಯಾಳ ಶೆಟ್ಟಿಯು ಬರಿಯ ಪುರಾಣ ವ್ಯಕ್ತಿಯಲ್ಲ ; ಅವನು ಐತಿಹಾಸಿಕ ಪುರುಷನು. ಸಿರಿಯಾಳ ಶೆಟ್ಟಿಯು ಪಲ್ಲವರಾಜನಾದ ಅನುಭಾಯಿ ಚೋಳನ ಸೇನಾಧಿಪತಿಯಾಗಿ ವಾತಾಪಿಯನ್ನು ಗೆದ್ದನೆಂದೂ, ತಿರುಜ್ಞಾನ ಸಂಬಂಧಿಗಳ ಸಮಕಾಲೀನನೆಂದೂ, ಸುಮಾರು ಆರನೇ ಶತಮಾನದಲ್ಲಿದ್ದ ನೆಂದೂ ಇತಿಹಾಸ ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ತನ್ನ ವೀರ ಭಕ್ತಿಯಿಂದ, ಅನುಪಮ ನಿಷ್ಠೆಯಿಂದ ತನ್ನ ಏಕಮಾತ್ರ ಕುಮಾರನನ್ನು ಶಿವಾ ರ್ಪಣಮಾಡಿದ ಆ ಮಹಿಮನು ಅಖಂಡ ಭರತಖಂಡದ ಭಕ್ತರ ಚರಿತ್ರೆಯಲ್ಲಿ ಇಂದಿಗೂ ಪ್ರಕಾಶಿಸುತ್ತಿದ್ದಾನೆ. ತಮಿಳುನಾಡಿನ ಅರುವತ್ತುಮೂವರು ಪುರಾತನರನ್ನು ಎಲ್ಲ ಶಿವಭಕ್ತರೂ ವರ್ಣಿಸಿದ್ದಾರೆ. ಶೈವ ಮತಾಚಾರ್ಯ ರುಗಳೂ, ಕವಿಗಳೂ ಇವರುಗಳನ್ನು ಹೊಗಳಿದ್ದಾರೆ, ಆದರ್ಶಪುರುಷರೆಂದು ಪರಿಗಣಿಸಿದ್ದಾರೆ. ಈ ಅರುವತ್ತುಮೂವರು ಪುರಾತನರಲ್ಲಿ ಸಿರಿಯಾಳ ಶೆಟ್ಟಿಯೂ ಒಬ್ಬನು. ಈತನನ್ನು ಸಹಸ್ರಋಷಿಗೋತ್ರದ "ನಗರ್ತ–ವೈಶ್ಯರು" ತಮ್ಮ ಕುಲದವನೆಂದು ನಂಬಿದ್ದಾರೆ. ಹಾಗೆಹೇಳಲು ತಕ್ಕಷ್ಟು ಆಧಾರಗಳು ಸಾಹಿತ್ಯದಲ್ಲೂ ಶಾಸನದಲ್ಲೂ ಇವೆ.

ಭಕ್ತ ಸಿರಿಯಾಳ ಶೆಟ್ಟಿಯ ಚರಿತ್ರೆಯೊಂದನ್ನು ಬರೆಯಬೇಕೆಂಬ ಬಹುದಿನಗಳಿಂದ ನನ್ನ ಮನಸ್ಸಿನಲ್ಲಿದ್ದ ಬಯಕೆ ಈಶ್ವರಾನುಗ್ರಹ ದಿಂದ ಈಗ ಕೈಗೂಡುತ್ತಿದೆ. ನಾನು ಮೈಸೂರು ಮಹಾರಾಜಾ ಕಾಲೇಜಿನಲ್ಲಿ

ವ್ಯಾಸಂಗ ಮಾಡುತ್ತಿದ್ದಾಗ ಆಂಧ್ರಕವಿ ಸಾರ್ವಭೌಮನಾದ ಶ್ರೀನಾಥ ಕವಿಯ ತೆಲುಗಿನ ಹರವಿಲಾಸವನ್ನು, ಆ ಕಾಲೇಜಿನ ಆಂಧ್ರ ಭಾಷಾ ಮುಖ್ಯಾಧ್ಯಾಪಕರಾದ ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮ ರವರಲ್ಲಿ ಓದಲು ಅವಕಾಶವಾಯಿತು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ತಮಿಳು ಮುಖ್ಯಾಧ್ಯಾಪಕರಾಗಿರುವ ಶ್ರೀ ಎನ್. ಚಂಗಲ್ವರಾಯನ್ ಅವರಿಂದ ತಮಿಳಿನ ಪೆರಿಯಪುರಾಣದಲ್ಲಿರುವ ಸಿರಿಯಾಳನ ಚರಿತ್ರೆ ಯನ್ನು ಓದಿಸಿ ಕೇಳುವ ಅವಕಾಶ ಮೊನ್ನೆ ಮೊನ್ನೆ ದೊರಕಿತು. ಷಡಕ್ಷರದೇವ, ಸುರಂಗ ಕವಿ, ಮುಂತಾದ ಕನ್ನಡದ ಪ್ರಸಿದ್ಧ ಕವಿಗಳು ಸಿರಿಯಾಳನನ್ನು ಕುರಿತು ಹೇಳಿರುವುದನ್ನು ನೋಡಿರುವೆನು. ಈ ರೀತಿ ಕನ್ನಡ ತೆಲುಗು ತಮಿಳುಗಳಿಂದ ಸಿರಿಯಾಳನ ಚರಿತ್ರೆಗೆ ಸಂಬಂಧಿಸಿದ ಸಾಧನಗಳನ್ನು ಒದಗಿಸಿಕೊಳ್ಳಲು ಸಾಧ್ಯವಾದಷ್ಟು ಪ್ರಯತ್ನಿಸಿರುವೆನು. ಶ್ರೀ ಬಸವೇಶ್ವರರು ಸಿರಿಯಾಳನನ್ನು ಕುರಿತು ಹೇಳಿರುವುದನ್ನು ಗಮ ನಿಸಿದ್ದೇನೆ. ಈ ಎಲ್ಲ ಸಾಹಿತ್ಯ ಸಾಧನಗಳನ್ನು ಸಮೀಕರಿಸಿ ಈ ಚಿಕ್ಕ ಪುಸ್ತಕವನ್ನು ಬರೆದಿದ್ದೇನೆ. ಆದರೆ ಉಭಯ ಕವಿ ಶರಭಭೇರುಂಡನೆನಿಸಿದ ಶಿವ ಕವೀಂದ್ರನಾದ ಹರಿಹರದೇವನ 'ಸಿರಿಯಾಳ ರಗಳೆ'ಯನ್ನೂ ಈ ಪುಸ್ತಕ ವನ್ನು ಬರೆಯುವ ಮೊದಲು ನೋಡಬೇಕೆಂಬ ಆಶೆ ಸಫಲವಾಗಲಿಲ್ಲ. ಸಹೃ ದಯರ ದಯದಿಂದ ಮುಂದಾದರೂ ಅದು ಲಭಿಸುವುದೆಂದು ಕಾದಿದ್ದೇನೆ.

ಕನ್ನಡದಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ಹಾಡಿರುವ ಅರುವತ್ತು ಮೂರು ಪುರಾತನರ ತ್ರಿವಿಧಿಯು ಎಲ್ಲ ಕನ್ನಡಿಗರಲ್ಲಿ ಬಹಳ ಪ್ರಚಾರದಲ್ಲಿರು ವಂತಹದು. ಅದನ್ನೂ, ತಮಿಳು, ಕನ್ನಡ, ತೆಲಗು ದೇಶಗಳಲ್ಲಿ ಶಿವಮತ ಪ್ರಚಾರಕರೆಂದೂ ಕವಿಗಳೆಂದೂ ಪ್ರಸಿದ್ಧರಾಗಿರುವ ತಿರುಜ್ಞಾನ ಸಂಬಂಧಿಗಳು, ಪಟ್ಟಣತ್ತಾರು, ನಂಬಿಯಾಂಡರ್ ನಂಬಿಗಳು, ಸುಂದರರು, ಶೇಕ್ಕಿರಾರು, ಬಸವೇಶ್ವರ, ಷಡಕ್ಷರಕವಿ, ಶ್ರೀನಾಥ ಇವರೂ ಶ್ರೀ ಸಿರಿಯಾಳನನ್ನು ಸ್ತುತಿಸಿ ರುವ ಕಾವ್ಯಭಾಗಗಳನ್ನು ಸಹ ಸ್ವಲ್ಪ ಮಾತ್ರ ಕೊಡಲಾಗಿದೆ. ಸಿರಿಯಾಳ ಶೆಟ್ಟಿ ಯನ್ನು ಕುರಿತು ಈ ಮೂರು ಭಾಷೆಗಳಲ್ಲೂ ಇರುವ ಗ್ರಂಥಗಳಲ್ಲಿ ಹಲಕೆಲವು ಮಾರ್ಪಾಡುಗಳಿರುತ್ತವೆ. ಅವನ್ನೂ ಪರಿಶಿಷ್ಟದಲ್ಲಿ ಹೇಳಿರಲಾಗಿದೆ. ಸಿರಿ

ಯಾಳಶೆಟ್ಟಿಯ ಚರಿತ್ರೆಯು ಜಂಗಮಾಧಿಕ್ಯವನ್ನು ನಿರೂಪಿಸುವುದರಿಂದ ಜಂಗಮನನ್ನು ಕುರಿತು ಕೆಲವು ಶ್ಲೋಕಗಳನ್ನೂ ವಚನಗಳನ್ನೂ ಈ ಪುಸ್ತಕದಲ್ಲಿ ಸೇರಿಸಲಾಗಿದೆ. ಈ ಚರಿತ್ರೆಯನ್ನು ಹೊರಗೆಡಹುವುದರಲ್ಲಿ ನನಗೆ ಸಹಾಯ ಮಾಡಿದ ಅನೇಕರನ್ನು ಕೃತಜ್ಞತೆಯಿಂದ ನೆನೆಸಬೇಕಾಗಿದೆ. ಈ ಮೊದಲೇ ನೆನೆದಿರುವಂತೆ, ಶ್ರೀಗಳಾದ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮರವರಿಗೂ ಎಲ್.ಚಂಗಲ್ವರಾಯನ್ ಅವರಿಗೂ ನನ್ನ ನಮಸ್ಕಾರಗಳು. ಈ ಪುಸ್ತಕದಲ್ಲಿ ಕೊಡಲಾಗಿರುವ ಶ್ರೀ ಸಿರಿಯಾಳನ ಮುಖಚಿತ್ರವು ಮೈಸೂರಿನ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳವರ ಕಲಾಶಾಲೆಯಲ್ಲಿ ಸಿದ್ಧವಾದುದು. ಅದನ್ನು ಅತ್ಯಲ್ಪಕಾಲದಲ್ಲಿ ಬರೆದುಕೊಟ್ಟ ಶ್ರೀ ನಾಗೇಂದ್ರಸ್ಥಪತಿಯವರಿಗೂ ನನ್ನ ವಂದನೆಗಳು. ಈ ಕೃತಿಯನ್ನು ಸಿದ್ಧಗೊಳಿಸುವ ಕಾರ್ಯದಲ್ಲಿ ಶ್ರೀಮಾನ್ ಮತಿಘಟ್ಟ ಕೃಷ್ಣಮೂರ್ತಿಯವರ ಸಹಾಯವು ಅಮೂಲ್ಯವಾದುದು. ಈ ಗ್ರಂಥರಚನಾ ಕಾರ್ಯದಲ್ಲಿ ಅವರು ವಿಶೇಷ ಶ್ರಮವಹಿಸಿದ್ದಾರೆ. ಅವರಿಗೂ ಈ ಕಾರ್ಯದಲ್ಲಿ ನೆರವಾದ ಎಲ್ಲ ಮಿತ್ರರಿಗೂ ನಾನು ಕೃತಜ್ಞನಿದ್ದೇನೆ. ಕನ್ನಡಿಗರು ಸಹೃದಯದಿಂದ ಈ ಚಿಕ್ಕ ಪುಸ್ತಕದಲ್ಲಿರುವ ತಪ್ಪುಗಳನ್ನು ದಯಮಾಡಿ ತಿದ್ದಿಕೊಡಬೇಕಾಗಿ ಕೋರುತ್ತೇನೆ.

ಬೆಂಗಳೂರು
ಶ್ರೀ ವೃಷ ಸಂವತ್ಸರದ ಯುಗಾದಿ

ಜೆ. ವಿ. ದೊಡ್ಡವೀರಪ್ಪ



# ಭಕ್ತ ಸಿರಿಯಾಳ ಶೆಟ್ಟಿ



ಶಿವಕ್ಷೇತ್ರ, ಶಿವಪೂಜೆ, ಶಿವ ಕೀರ್ತನೆ, ಶಿವಾರಾಧನೆ, ಶಿವಚಿಂತೆ, ಶಿವ ಧರ್ಮಾಚರಣೆ ಶಿವತತ್ವಗಳಿಗೆ ತವರ್ಮನೆ ಎನಿಸಿರುವ ಚೋಳಮಂಡಲದಲ್ಲಿ ಮುಗಿಲು ಮುಟ್ಟುವ ಗೋಪುರ, ವಿಶಾಲವಾದ ಪ್ರಾಕಾರ, ಆ ಪ್ರಾಕಾರದೊಳಗೆ ಹೊಳೆಯುತ್ತಿರುವ ಪುಷ್ಕರಣಿಗಳು ಇವುಗಳಿಂದ ಕೂಡಿ ಮೆರೆಯುತ್ತಿರುವ ಶ್ರೀ ಏಕಾಂಬ್ರನಾಥಸ್ವಾಮಿಯ ದೇವಾಲಯವೇ ಮುಂತಾದ ದೇವಾಲಯಗಳಿಂದಲೂ, ಸಾಧುಸಂತರ ವಸತಿಗಳಿಂದಲೂ, ಭವ್ಯವಾದ ಗುರುಕುಲಗಳಿಂದಲೂ, ಷಟ್ಕರ್ಮ ನಿರತರಾದ ವಿದ್ವನ್ಮಣಿಗಳಾದ ಬ್ರಾಹ್ಮಣರ ಅಗ್ರಹಾರಗಳಿಂದಲೂ, ಮಹಾ ಹರ್ಮ್ಯಗಳಿಂದಲೂ, ರಾಜಗೃಹಗಳಿಂದಲೂ, ದುರ್ಗಮವಾದ ಕೋಟೆ ಕೊತ್ತಲಗಳಿಂದಲೂ, ಚತುರಂಗಬಲದ ಬೀಡುಗಳಿಂದಲೂ, ಭೂಜಲ ಮಾರ್ಗವಾಗಿ ದೂರ ದೇಶಗಳೊಡನೆ ವ್ಯಾಪಾರ ಮಾಡಿ ತಮ್ಮ ನಾಡಿಗೆ ದಿನ ದಿನವೂ ಅತುಳವಾದ ಧನರಾಶಿಯನ್ನು ತರುತ್ತಿದ್ದ ವರ್ತಕಶ್ರೇಷ್ಠರಿಂದಲೂ, ವರ್ಣಾಶ್ರಮ ಧರ್ಮ ಪರಾಯಣರಾದ ಪ್ರಜೆಗಳಿಂದಲೂ ಕೂಡಿ ಸಪ್ತ ಮುಕ್ತಿ ಪಟ್ಟಣಗಳಲ್ಲೊಂದಾದ ಬ್ರಹ್ಮಾಶ್ವಮೇಧ ಸ್ಥಾನವಾದ ಕಾಂಚೀ ನಗರವು ಸಕಲ ವೈಭವಗಳಿಂದ ಒಪ್ಪುತ್ತಿತ್ತು.

ಸಕಲ ಸಂಪತ್ತುಗಳಿಗೆ ಆಕರವಾದ ಆ ಕಾಂಚೀ ನಗರದಲ್ಲಿ ಸಿರಿಯಾಳ ಶೆಟ್ಟಿ ಎಂಬ ವಣಿಗ್ವರನು ಜಂಗಮ ಸೇವಾಪರನಾಗಿ, ಷಟ್ಕಾಲ ಲಿಂಗಾರ್ಚನೆ, ತ್ರಿಕಾಲ ಸಂಧ್ಯಾವಂದನೆ, ಶಿವಾನುಭವಗಳಲ್ಲಿ ನಿರತನಾಗಿ, ಕೃಷಿ ಗೋರಕ್ಷಣೆ ವಾಣಿಜ್ಯವೇ ಮೊದಲಾದ ಸ್ವಕುಲ ಕರ್ಮಗಳಲ್ಲಿ ಆಸಕ್ತನಾಗಿ ವೈಶ್ಯಕುಲ ಚೂಡಾಮಣಿಯಾಗಿದ್ದನು. ಮಹಾತೇಜಸ್ವಿಯೂ ಪ್ರಾಜ್ಞನೂ ಆದ ಸಿರಿಯಾಳನು ಕಾವೇರೀ ತೀರದಲ್ಲಿದ್ದ ತಿರುಚಂಗಟ್ಟನ ಗುಡಿ ಎಂಬಲ್ಲಿ ಜನ್ಮವೆತ್ತಿ, ವೈದ್ಯ ಸಾಹಿತ್ಯ ಕಲೆಗಳಲ್ಲಿ ವಿಶೇಷ ಪರಿಶ್ರಮ ಹೊಂದಿ

ಆನೆ ಕುದುರೆಗಳ ಸವಾರಿಯಲ್ಲಿಯೂ, ಯುದ್ಧ ವಿದ್ಯೆಯಲ್ಲಿಯೂ ಅನುಪಮವಾದ ಪ್ರಾವೀಣ್ಯತೆಯನ್ನು ಪಡೆದಿದ್ದನು. ವೇದ ವೇದಾಂಗಗಳನ್ನರಿತು ಪರಶಿವನೇ ಸರ್ವೋತ್ಕೃಷ್ಟನೆಂದು ತಿಳಿದು ವೀರ ಶಿವಭಕ್ತನಾಗಿದ್ದನು. ಈತನು ಪಲ್ಲವರ ಅರಸನಾದ ಅನುಭಾಯಿ ಚೋಳನ ಸೇನಾನಿಯಾಗಿದ್ದನು. ರಾಜಸೇವೆಯು ಈತನ ಮನೆತನಕ್ಕೆ ಪರಂಪರೆಯಾಗಿ ಬಂದುದು. ಗೆಲ್ಲಲು ಅಸಾಧ್ಯವೆನಿಸಿದ್ದ ವಾತಾಪಿ ನಗರವನ್ನು ಜಯಿಸಿ, ವಿಶೇಷವಾದ ದ್ರವ್ಯವನ್ನೂ ಆನೆ ಕುದುರೆಗಳನ್ನೂ ತಂದು ತನ್ನರಸನಿಗೆ ಒಪ್ಪಿಸಿದನು. ಆತನ ಪರಾಕ್ರಮಕ್ಕೆ ವಿಸ್ಮಿತನಾದ ಅನುಭಾಯಿ ಚೋಳನು ಮಂತ್ರಿಗಳಿಂದ, ಸಿರಿಯಾಳನು "ಮಹಾದೇವ ಭಕ್ತಾಗ್ರೇಸರ"ನೆಂದೂ ಆದಕಾರಣವೇ ಅವನಿಂದ ಅಂತಹ ಮಹತ್ಕಾರ್ಯವು ಸಾಧಿಸಲಾಯಿತೆಂದೂ ತಿಳಿದು, ಆ ಮಹಿಮನನ್ನು ಸೇವಕನಂತೆ ಭಾವಿಸಿದ್ದುದಕ್ಕಾಗಿ ಕ್ಷಮೆ ಬೇಡಿ, ಸೇನಾಧಿಪತ್ಯದ ಕೆಲಸದಿಂದ ವಿರಮಿಸಲು ಅನುಮತಿಯಿತ್ತು, ಶಿವಪೂಜಾ ಕೈಂಕರ್ಯವನ್ನು ಮನಸಾರ ನಡೆಸಿಕೊಂಡು ಹೋಗುವಂತೆ ಬಿನ್ನವಿಸಿ ವಿಶೇಷ ದ್ರವ್ಯಾಭರಣಗಳನ್ನು ಕೊಟ್ಟು ಗೌರವಿಸಿದನು.

ಹೀಗೆ ಯುದ್ಧದಲ್ಲಿಯೂ ಭಕ್ತಿಯಲ್ಲಿಯೂ ವೀರನೆನಿಸಿದ ಆ ಸಿರಿಯಾಳ ಶೆಟ್ಟಿಗೆ ಚಂಗಳೆಯೆಂಬ (ತೆಲುಗಿನಲ್ಲಿ ತಿರುವೆಂಗನಾಚಿ ಎಂದೂ, ತಮಿಳುನಲ್ಲಿ ತಿರುವೆಂಗಾಡು ನಂಗೈ ಎಂದೂ ಹೆಸರುಳ್ಳ) ನಾರೀಮಣಿಯು ಧರ್ಮಪತ್ನಿಯಾಗಿ, ಗೃಹಲಕ್ಷ್ಮಿಯಾಗಿ, ಪತಿವ್ರತಾ ಪರಾಯಿಣೆಯಾಗಿ, ಗಂಡನನ್ನು ನೆರಳಿನಂತೆ ಅನುಸರಿಸುತ್ತ ಯಾವುದು ಪತಿಗೆ ಪ್ರಿಯವೋ ಅದೇ ತನಗೂ ಪ್ರಿಯವೆಂದೂ ಯಾವುದು ಅವನಿಗೆ ಬೇಡವಾದುದೋ ಅದೇ ತನಗೂ ಬೇಡವಾದುದೆಂದು ತಿಳಿದು ಸಿರಿಯಾಳನಿಗೆ ಅನುಕೂಲಳಾಗಿ ವರ್ತಿಸುತ್ತಿದ್ದಳು. ಸದಾ ಶಿವಧ್ಯಾನಾಸಕ್ತಳಾಗಿ ಷಟ್ಕಾಲ ಲಿಂಗಾರ್ಚನೆ ಪರಾಯಣಳಾಗಿ ಗುರುಲಿಂಗ ಜಂಗಮ ಕೈಂಕರ್ಯದಲ್ಲಿ ಅನನ್ಯವಾದ ಭಕ್ತಿ ಶ್ರದ್ಧೆಗಳಿಂದ ಚಂಗಳೆಯು ಪತಿಯನ್ನು ಮೀರಿಸುವಂತಿದ್ದಳು. ಸಿರಿಯಾಳ ಚಂಗಳೆಯರು ದೇಹನೆರಡಾದರೂ ಮನವೊಂದಾಗಿ, ಭಕ್ತಿಯೇ ಪ್ರಕೃತಿ–ಪುರುಷರಂತೆ ಈ ದಂಪತಿಗಳ ರೂಪಾಂತಿರುವುದೋ ಎಂಬಂತಿದ್ದರು. ಆ ದಂಪತಿಗಳನ್ನು ನೋಡಿ ಅತಿಥಿಗಳು ಬಂಧುಬಾಂಧವರೂ ಆನಂದತುಂದಿಲ ಹೃದಯರಾಗುತ್ತಿದ್ದರು.

(ಸಿರಿಯಾಳನು ಪೂರ್ವ ಜನ್ಮದಲ್ಲಿ ತುಂಬುರನೆಂಬ ಪ್ರಮಥನಾಗಿದ್ದನು. ಆವನು ತನ್ನ ಪತ್ನಿಯೊಡನೆ ಶಿವಾರ್ಚನಾಪೇಕ್ಷೆಯಿಂದ ಗೋಕರ್ಣ ಕ್ಷೇತ್ರಕ್ಕೆ ವಾಯು ಮಾರ್ಗದಲ್ಲಿ ಪ್ರಯಾಣ ಬೆಳೆಸುತ್ತಿದ್ದನು. ಆಗ ಅವನು ಬದರಿಕಾಶ್ರಮವನ್ನು ದಾಟಿಬರಬೇಕಾಯಿತು. ಹಾಗೆ ಬರುತ್ತಿರುವಾಗ ಆ ಆಶ್ರಮದಲ್ಲಿ ರುದ್ರಾಂಶ ಸಂಭೂತನಾದ ದೂರ್ವಾಸಮುನಿಯು ಜಿಂಕೆಯ ಮರಿಗಳಿಗೆ ಹವಿಶ್ಶೇಷವಾದ ಪಾಯಸಾನ್ನವನ್ನು ಬಹು ಪ್ರೀತಿಯಿಂದ ತಿನ್ನಿಸುತ್ತಿದ್ದುದನ್ನು ಕಂಡು ಆ ಮುನಿಯ ಭೂತದಯಾನುಕಂಪನಕ್ಕೆ ತಲೆದೂಗಿ ಮೆಚ್ಚಿಕೆಯಿಂದ ಚಿಟಿಕೆಯನ್ನು (ಅಂಗುಳಿಸ್ಫೋಟನ) ಹೊಡೆಯಲು ಆ ಶಬ್ದಕ್ಕೆ ಜಿಂಕೆಯ ಮರಿಗಳು ಚದುರಿ ಬೆದರಿ ಓಡಿದವು. ಆಗ ದೂರ್ವಾಸ ಮುನಿಯು ಕುಪಿತನಾಗಿ, ಕಣ್ಣೆತ್ತಿ ರೋಷದೃಷ್ಟಿಯನ್ನು ಆಕಾಶದಲ್ಲಿ ಪಸರಿಸಿ, 'ಎಲವೋ ದುರಾಚಾರಿ, ಗರ್ವಿಷ್ಠನಾಗಿರುವ ನೀನು ಭೂಮಿಯಲ್ಲಿ ಮಾನವನಾಗಿ ಜನಿಸು' ಎಂದು ಆ ಪ್ರಮಥನನ್ನು ಶಪಿಸಿದನು. ಆ ಪ್ರಮಥನು ಭಯ ಭ್ರಾಂತನಾಗಿ, ಕೆಳಗಿಳಿದು ದೂರ್ವಾಸಮುನಿಗೆ ಸಾಷ್ಟಾಂಗವೆರಗಿ "ಮಹಾತ್ಮಾ, ಸಮಸ್ತ ಪ್ರಾಣಿಗಳಲ್ಲಿರುವ ತಮ್ಮ ಕರುಣೆಯನ್ನು ಕಂಡು ನನ್ನ ಮನಸ್ಸೂ ಕರುಣದಲ್ಲಿ ಜಾರಿ ಚಿಟಿಕೆಯನ್ನು ಹೊಡೆದೆನಲ್ಲದೆ ಬೇರೆಯಲ್ಲ. ಏರೂ ಪಾಕ್ಷಾಂಶ ಸಂಭೂತರಾದ ತಮ್ಮ ಮಾತು ವ್ಯರ್ಥವಾಗಲಾರದು. ನಾನು ಮಾನವನಾಗಿ ಜನ್ಮವೆತ್ತಿಯೇ ತೀರಬೇಕು. ಆದರೆ ಆ ಜನ್ಮದಲ್ಲಿ ಶಿವಭಕ್ತನಾಗಿರುವಂತೆ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದನು. ದೂರ್ವಾಸಮುನಿಯು ಆ ಪ್ರಮಥನ ಪ್ರಾರ್ಥನೆಯನ್ನು ಮನ್ನಿಸಿ "ಶಿವಭಕ್ತ್ಯಾಚಾರ ಸಾಮ್ರಾಜ್ಯ ಲಕ್ಷ್ಮೀ ಕಂಠಾಭರಣವೆನಿಸಿದ ಚೋಳ ಮಂಡಲದಲ್ಲಿ, ನಿರ್ಮಲವಣಿಕ್ಶ್ರೇಷ್ಠಾನ್ವಯದಲ್ಲಿ" ಜನ್ಮವೆತ್ತೆಂದು ಅನುಗ್ರಹಿಸಿದನು. ಅಂತೆಯೇ ಆ ಪ್ರಮಥ ದಂಪತಿಗಳು ಚೋಳಧರೆಯಲ್ಲಿ ಸಿರಿಯಾಳ ಚಂಗಳೆಯರಾಗಿ ಜನ್ಮವೆತ್ತಿದ್ದರು.)

ಸಿರಿಯಾಳ ಚಂಗಳೆಯರಿಗೆ (ಕುಮಾರ ಸ್ವಾಮಿಯ ಅವತಾರವಾದ) ಚೀಲಾಳನೆಂಬ ತೇಜಸ್ವಿಯಾದ ಮುದ್ದುಮಗನಾದನು. ಅವನು ತನ್ನ ಅನುಪಮವಾದ ಪ್ರತಿಭೆಯಿಂದ ಗ್ರಹಣಶಕ್ತಿಯಿಂದ ಸರ್ವರನ್ನೂ ಬೆರಗುಗೊಳಿಸುತ್ತಿದ್ದನು. ಆ ಚಿಕ್ಕ ಬಾಲಕನಲ್ಲಿದ್ದ ಅಸಾಮಾನ್ಯ ಶಕ್ತಿಯನ್ನೂ

ತೇಜಸ್ಸನ್ನೂ ಕಂಡು ಆ ಬಾಲಕನನ್ನು ಹೆತ್ತ ಸಿರಿಯಾಳ ಚಂಗಳೆಯರೇ ಧನ್ಯರೆಂದು ಎಲ್ಲರೂ ಶ್ಲಾಘಿಸುತ್ತಿದ್ದರು. ಚೀಲಾಳನು ಸದಾ ಶಿವಧ್ಯಾನಾ ಸಕ್ತನಾಗಿ ಗುರುಲಿಂಗಜಂಗಮ ಪ್ರೇಮಿಯಾಗಿ, ಮಾತಾಪಿತೃಗಳಿಗೆ ಅತ್ಯಂತ ವಿಧೇಯನಾಗಿದ್ದನು. ಸಿರಿಯಾಳನು ತನ್ನ ಮಗನಿಗೆ ಕ್ರಮವಾಗಿ ಅಕ್ಷರಾ ಭ್ಯಾಸವನ್ನು ಮಾಡಿಸಿ ಯೋಗ್ಯರಾದ ಗುರುಗಳಲ್ಲಿ ಸದ್ವಿದ್ಯೆಗಳನ್ನು ಹೇಳಿ ಸುತ್ತಿದ್ದನು.

ಸಿರಿಯಾಳ ಚಂಗಳೆಯರು ಸಮಸ್ತ ಐಶ್ವರ್ಯಗಳಿಗೂ ಶಿವನೇ ಕರ್ತೃವೆಂದೂ, ಅವನೇ ಭೋಕ್ತೃವೆಂದೂ ದೃಢವಾಗಿ ನಂಬಿ "ಜಂಗಮ ಮುಖದಲ್ಲಿ ಲಿಂಗವುಂಬುದೆಂ"ಬುದನ್ನು ತಿಳಿದು ಅನ್ನದಾನ ಮಾಡು ವುದೇ ಮಹಾವ್ರತವೆಂದು ಭಾವಿಸಿ, ಸದಾ ಅತಿಥಿ ಜಂಗಮ ಸೇವಾ ತತ್ಪರರಾಗಿದ್ದರು. ಯಾರು, ಯಾವಾಗ ಏನನ್ನೇ ಕೋರಿದರೂ, ಶರೀರ ಅರ್ಥ ಪ್ರಾಣವಂಚನೆಯಿಲ್ಲದೆ ಬಹಳ ಸಂತೋಷದಿಂದ ಆ ಕೋರಿಕೆಗಳನ್ನು ಸಲ್ಲಿಸುತ್ತಿದ್ದರು. ಈ ಮಹಾದಾನಿಗಳ ಕೀರ್ತಿ ಪ್ರಭೆಯು ಸಮಸ್ತ ದಿಕ್ಕುಗ ಳಲ್ಲೂ ವ್ಯಾಪಿಸಿ ಅಸಂಖ್ಯ ಜಂಗಮರನ್ನೂ, ಶಿವಯೋಗಿಗಳನ್ನೂ, ದೀನಾನಾಥ ರನ್ನೂ ಕಂಚಿಗೆ ಆಕರ್ಷಿಸಿತು. ತಂಡೋಪತಂಡವಾಗಿ ಬರುತ್ತಿದ್ದ ಅತಿಥಿ ಗಳನ್ನು ಶಿವಸ್ವರೂಪರೆಂದೇ ತಿಳಿದು ಸಿರಿಯಾಳ ಚಂಗಳೆಯರು ಅತ್ಯಾನಂದ ದಿಂದ ಉಪಚರಿಸಿ ಅವರಿಗೆಲ್ಲಾ ಇಚ್ಛಾನ್ನಗಳನ್ನಿಕ್ಕಿ ತೃಪ್ತಿಪಡಿಸುತ್ತಿದ್ದರು.

ಹೀಗೆ ಸಿರಿಯಾಳನ ಕೀರ್ತಿಪ್ರಭೆಯು ಭೂಮಿಯನ್ನೆಲ್ಲಾ ಆವ ರಿಸಿತು. ಸೃಷ್ಟ್ಯಾದಿ ಪಂಚ ಕೃತ್ಯಗಳಿಗೆ ಪತಿಯಾದ ಪರಮೇಶ್ವರನು ಕೈಲಾಸದಲ್ಲಿ ಸಮಸ್ತ ದೇವತೆಗಳಿಂದಲೂ, ಗಣಗಳಿಂದಲೂ ಓಲೈಸಲ್ಪಟ್ಟವ ನಾಗಿ ಒಡ್ಡೋಲಗದಲ್ಲಿ ಗಿರಿಜೆಸಹಿತ ಸಿಂಹಾಸನಾಸೀನನಾಗಿದ್ದನು. ಆಗ, ಇದ್ದಕ್ಕಿದ್ದಂತೆ ಶಿವನು ಬೆವರಿದನು. ಅದಕ್ಕೆ ಕಾರಣವೇನೆಂದು ಪಾರ್ವ ತಿಯು ಪ್ರಶ್ನೆ ಮಾಡಿದಳು. ಪರಮೇಶ್ವರನು ಮುಗುಳ್ನಗೆಯಿಂದ, ಸಭೆಯಲ್ಲಿದ್ದ ಗೋವಿಂದ, ಶತಾನಂದ ಪುರಂದರಾದಿ ಬೃಂದಾರಕರೆಲ್ಲರೂ ಕೇಳುವಂತೆ ಹೇಳಿ ದನು. "ಚೋಳಮಂಡಲದಲ್ಲಿ ಪ್ರಸಿದ್ಧವಾದ ಕಾಂಚೀ ನಗರದಲ್ಲಿ ಸಿರಿಯಾಳ ಶೆಟ್ಟಿಯೆಂಬೊಬ್ಬ ನನ್ನ ಭಕ್ತನಿರುವನು. ಅತಿಥಿಗಳು ಬಯಸಿದುದನ್ನು

ಋಣಬಡಿಸುವುದೇ ಮಹಾ ವ್ರತವಾಗಿ ಭಾವಿಸಿ, ಮಹಾದಾನಿಯಾಗಿ, ಪ್ರತಿನಿತ್ಯವೂ ಸಹಸ್ರಾರು ಅತಿಥಿಗಳನ್ನು ಇಚ್ಛಾಭನ್ನದಿಂದ ತೃಪ್ತಿಪಡಿಸುತ್ತಿರುವನು. ಇಂದು ಒಬ್ಬ ಭಿಕ್ಷಾವೃತ್ತಿಯ ಜಂಗಮನು ಬಂದು ಸಿರಿಯಾಳ ಶೆಟ್ಟಿಯನ್ನು ಕಬ್ಬಿನ ಹಾಲು ಬೇಕೆಂದು ಕೋರಿದನು. ಆ ಜಂಗಮನ ಅಭೀಷ್ಟವನ್ನು ನೆರವೇರಿಸಿ ಕೊಡಲು ಕಂಚಿಯ ಹೊರವಳಯದಲ್ಲಿರುವ ಕಬ್ಬಿನ ಗದ್ದೆಗೆ ಸಿರಿಯಾಳನು ತಾನೇ ಹೋಗಿ ನೂರು ಜಲ್ಲೆ ಕಬ್ಬನ್ನು ಕೊಂಡುಕೊಂಡು ಹೊರೆ ಕಟ್ಟಿ ಅದನ್ನು ಹೆಗಲಮೇಲಕ್ಕೆ ಎತ್ತಲು ಸಾಧ್ಯವಾಗದೆ ಕಷ್ಟಪಡುತ್ತಿದ್ದನು. ಆ ಭಕ್ತನ ಕಷ್ಟವನ್ನು ಹರಿಸಲು ನಾನೇ ಹೋಗಿ ಆ ಕಬ್ಬಿನ ಹೊರೆಯನ್ನು ಎತ್ತಿ ಸೂರಿಸಿದೆನು. ಅದು ಕಾರಣ ಜೀವರುತ್ತಿದ್ದೇನೆ." ಹೀಗೆ ಸಿರಿಯಾಳನ ಅತಿಥಿ ಪೂಜಾ ನಿಷ್ಠೆಯನ್ನು ಸಮಸ್ತ ದೇವತೆಗಳ ಎದುರಿನಲ್ಲಿ ಹೇಳಿದನು. ಮಹಾದೇವನೇ ಮುಕ್ತಕಂಠನಾಗಿ ಹೊಗಳುತ್ತಿರುವ ಆ ಭಕ್ತಶ್ರೇಷ್ಠನನ್ನು ನೋಡಬೇಕೆಂದು ಸರ್ವಮಂಗಳೆಯು ಬಯಸಿದಳು. ಪರಮೇಶ್ವರನು ಅದಕ್ಕೆ ಸಮ್ಮತಿಸಿ, ಸಿರಿಯಾಳ ಶೆಟ್ಟಿಯ ಸತ್ವವನ್ನು ಪರೀಕ್ಷಿಸಲು ಮನಮಾಡಿ, ಇಂದ್ರನನ್ನು ಕರೆದು, ತನಗೆ ಬಹು ರಹಸ್ಯ ಕಾರ್ಯವಿರುವುದೆಂದೂ ಚೋಳಮಂಡಲದಲ್ಲಿ ವಿಪರೀತ ಮಳೆಯನ್ನು ಸುರಿಸಬೇಕೆಂದು ಅಪ್ಪಣೆ ಮಾಡಲು ಶಕ್ರನು ಪುಷ್ಕರಾವರ್ತವೇ ಮೊದಲಾದ ಮೋಡಗಳನ್ನು ಕರೆದು ಚೋಳ ಭೂಮಿಯಲ್ಲಿ ಮಳೆಗರೆಯಬೇಕೆಂದು ಕಳುಹಿದನು.

ಆಗ ಶಶಿರಋತುವು ಕಳೆದು ವಸಂತಋತುವು ಅಡಿ ಇಡುತ್ತಿತ್ತು. ಮಲ್ಲೆ ಮಲ್ಲಿಗೆ ಸಂಪಿಗೆ ಮೊದಲಾದ ಹೂಗಳು ಸುವಾಸನೆ ಬೀರುತ್ತ ವಿಶೇಷವಾಗಿ ಮನೋಹ್ಲಾದಕವಾಗಿದ್ದುವು. ಗಿಡಬಳ್ಳಿಗಳು ಚಿಗುರುಗಳಿಂದ ಕಂಗೊಳಿಸುತ್ತಿದ್ದುವು. ಆದರೆ ಬಿಸಿಲು ಸಹಿಸಲಸಾಧ್ಯವಾಗಿತ್ತು. ಬಿಸಿಲಿನ ತಾಪಕ್ಕೆ ಧರೆಯು ಕಾಯ್ದು ಮಹಾನದಿಗಳೂ ಬಡವಾಗಿ ಹೋಗಿದ್ದವು. ಸ್ವಚ್ಛವಾದ ಆಕಾಶದಲ್ಲಿ, ಚಂದ್ರನು ವಿಶೇಷ ಪ್ರಭೆಯಿಂದ ಬೆಳಗುತ್ತಿರಲು ಇರುಳು ಅತ್ಯಂತ ಸುಖದಾಯಕವಾಗಿದ್ದಿತು. ಮಂದಮಾರುತನು ಪುಷ್ಪಧೂಳಿಯನ್ನು ಹೊತ್ತು ಚೆಲ್ಲುತ್ತ ಹಗಲಿನ ಬೇಗೆಯಲ್ಲಿ ಬೆಂದ ಲೋಕದ ಶ್ರಮವನ್ನು ನಿವಾರಿಸಲು ಎಲ್ಲೆಲ್ಲೂ ಮೆಲುಮೆಲನೆ ಚಲಿಸುತ್ತಿದ್ದನು.

ಇಂತಹ ವಸಂತಋತುವು ಲೋಕಕ್ಕೆ ಸಡಗರದಿಂದ ಅಡಿಯಿಡುತ್ತಿರಲು ಈಶ್ವರ ಸಂಕಲ್ಪದಂತೆ, ಪಡುವಣಿಂದ ಬಿರುಗಾಳಿಯು ಭೀಕರವಾಗಿ ಬೀಸಲು ಮೊದಲಾಯಿತು. ಜೋಳಮಂಡಲದ ನಿರ್ಮಲಾಕಾಶವನ್ನು ಅದ್ಭುತಾಕಾರದ ಕಾರ್ಮೋಡಗಳು ಕಿಕ್ಕಿರಿದು ಕವಿದವು. ಗುಡುಗುಗಳ ಶಬ್ದವು ಕರ್ಣ ಭಯಂಕರವಾಗಿದ್ದಿತು. ಮತ್ತು "ಕಾರ್ಮುಗಿಲ ಬಟ್ಟೆಯೊಳು, ಎಳೆ ಮಿಂಚು, ಬಳ್ಳಿ ಮಿಂಚು, ಚ್ಛಳಿಸುವ ಸೆಳೆಮಿಂಚು, ತೋರಮಿಂಚು, ಅಸಿಮಿಂಚು, ಗೊಂಚಲು ಮಿಂಚು, ಅಗ್ಗಳಿಸಿದ ಕುಡಿಮಿಂಚು" ಮಿಂಚಿದುವು. ಛಿಟಿಛಿಟಿಲೆಂದು ಸಿಡಿಲುಗಳು ಭೂಮ್ಯಾಂತರಿಕ್ಷಗಳನ್ನು ಮಹಾ ಘೋರವಾದ ಭಯಾನಕವಾದ ಶಬ್ದದಿಂದ ಗಡಗಡನೆ ನಡುಗಿಸಿದುವು. ಮತ್ತು ಜೇಷ್ಠ ಆಷಾಡಮಾಸಗಳಲ್ಲಿ ಸುರಿಯುವಂತೆ ಮಳೆಯು ಭಯಂಕರವಾಗಿ ಬಿಡುವಿಲ್ಲದೆ ಸುರಿಯಲು ಮೊದಲಾಯಿತು. "ಜಡಿಮಳೆ, ಜಿನುಗು, ಬಲ್ಸರಿ, ಯಿಡುಕುಂಬನಿ, ನಟ್ಟಿವನಿ, ಗಳೆವಳೆ, ತುಂತುರು, ಬಡಸರಿ, ಸೂಳ್ಸರಿ" ಮೊದಲಾದ ರೀತಿಯಲ್ಲಿ ಮಳೆಯು ಹಗಲಿರುಳೆನ್ನದೆ ಒಂದೇ ಸಮನೆ ಕರೆಯಿತು. ಅಕಾಲ ವರ್ಷದಿಂದ ಕೆರೆ ತೊರೆ ಹಳ್ಳಕೊಳ್ಳಗಳೆಲ್ಲವೂ ಒಂದಾಗಿ ನೆಲವೆಲ್ಲ ಜಲಮಯವಾಯಿತು.

ಹೀಗೆ ಅಕಾಲದಲ್ಲಿ ಅಸಾಮಾನ್ಯ ಮಳೆ ಹಿಡಿಯಲು ಅನೇಕ ಸಹಸ್ರಜಂಗಮರು ಏಕಕಾಲದಲ್ಲಿ ಸಿರಿಯಾಳನ ಮನೆಗೆ ಬಂದು ತಂಗಿದರು. ಆದರಿಂದ ಸಿರಿಯಾಳ ಚಂಗಳೆಯರಿಗೆ ಆದ ಸಂತೋಷವು ವರ್ಣನಾತೀತವಾದುದು. ಅಷ್ಟು ಜನ ಶಿವಭಕ್ತರ ಸೇವೆ ತಮಗೆ ಏಕಕಾಲದಲ್ಲಿ ಒದಗಲು ಕಾರಣವಾದ ಮಳೆಯನ್ನು ಅವರು ಈಶ್ವರಾನುಗ್ರಹವೆಂದೇ ಭಾವಿಸಿದರು. ಯಾವಾಗಲೂ ಆ ಶಿವಯೋಗಿಗಳ ಸೇವೆಯಲ್ಲೇ ಮನವಿಟ್ಟು ಅವರಿಗೆಲ್ಲಾ ಇಚ್ಛಾನ್ನವನ್ನಿಕ್ಕುತ್ತ ಅವರುಗಳ ಮನದಣಿಯುವಂತೆ ಉಪಚರಿಸುತ್ತಿರಲು ಕೆಲದಿನಗಳಲ್ಲೇ ಮನೆಯಲ್ಲಿದ್ದ ಅಡಿಗಬ್ಬೆಲ್ಲಾ ಮುಗಿಯಿತು. ಅವಿಶ್ರಾಂತವಾಗಿ ಅಸಾಮಾನ್ಯವಾಗಿ ಮಳೆ ಸುರಿಯುತ್ತಿದ್ದುದರಿಂದ ಹೊರಗೆ ಹೋಗಿ ತರಲು ಅವಕಾಶವಿಲ್ಲದೆ ಅತಿಥಿ ಜಂಗಮ ಸತ್ಕಾರಕ್ಕೆ ಆತಂಕವುಂಟಾಗುವಂತಾಯಿತು. ಆಗ ಸಿರಿ

ಯಾಳ ಜಂಗಳೆಯರು ವ್ಯಾಕುಲವಿಲ್ಲದೆ ಪೂಜಾದಿಗಳಿಗೆ ಸಂಗ್ರಹಿಸಿಟ್ಟಿದ್ದ ಚಂಪಸದ ಕೊಂಡುಗಳನ್ನೂ ಮನೆಗೆ ಹಾಕಿದ್ದ ತೊಲೆ ಮರ ಮುಟ್ಟುಗಳನ್ನೂ ಅಡಿಗೆ ಮಾಡಲು ಉಪಯೋಗಿಸುತ್ತ ಬಂದುದಲ್ಲದೆ, ಮನೆಯಲ್ಲಿದ್ದ ಅಮೂಲ್ಯವಾದ ಚೀನಿಚೀನಾಂಬರವೇ ಮುಂತಾದ ದಿವ್ಯ ದುಕೂಲಗಳನ್ನು ಎಣ್ಣೆ ತುಪ್ಪಗಳಲ್ಲದ್ದಿ ಒಲೆಗೆ ಹಾಕುತ್ತ, ಅತಿಥಿ ದೇವರುಗಳನ್ನು ಶುಚಿರುಚಿಯಾಗಿ ಮಾಡಿದ ಬಗೆಬಗೆಯ ಮೃಷ್ಟಾನ್ನಗಳಿಂದಲೂ, ಪರಿಪರಿಯ ಪಾಯಸಾನ್ನಗಳಿಂದಲೂ ಪೂರಿಗೆ, ಮಂಡಿಗೆ, ಚಕ್ಕುಲಿ, ಗಾರಿಗೆ, ವಡೆ, ದೋಸೆ, ಇಡ್ಡಲಿಗೆ ಮೊದಲಾದ ಭೋಜ್ಯಗಳಿಂದಲೂ ಅನೇಕ ತರವಾದ ತರಕಾರಿಗಳಿಂದ ಮಾಡಿದ ಮೇಲೋಗರಗಳೇ ಮೊದಲಾದ ನಾನಾ ವಿಧದ ಶಾಕಪಾಕಗಳಿಂದಲೂ ತೃಪ್ತಿಪಡಿಸಿ ಉಪಚರಿಸಿ, ಸಂತೋಷಪಡಿಸುತ್ತಿದ್ದರು. ಇಪ್ಪತ್ತೊಂದು ದಿನ ಏಕಪ್ರಕಾರವಾಗಿ ಸುರಿದ ಆ ಮಳೆ ದಿನಗಳಲ್ಲಿ ಆ ಶಿವ ಶರಣರೆಲ್ಲ ಸಿರಿಯಾಳ ಶೆಟ್ಟಿಯ ಮನೆಯುಸ್ಲಿ ಆದ ಸತ್ಕಾರಕ್ಕಾಗಿ ವಿಶೇಷ ಆನಂದವನ್ನು ಹೊಂದಿ, ಸಿರಿಯಾಳ ಜಂಗಳೆಯರನ್ನು ಹರಸಿದರು. ದೇವತೆಗಳೇ ಅತಿಥಿ ಜಂಗಮರೂಪ ತಳೆದು ಸಿರಿಯಾಳನ ಮನೆಗೆ ಬಂದಿದ್ದರು.

ಇಪ್ಪತ್ತೆರಡನೆಯ ದಿನ ಮಳೆಯು ನಿಂತಿತು. ಭೂಮಿಯ ಧಗೆ ಅಡಗಿತ್ತು. ತರುಗುಲ್ಮಲತೆಗಳೆಲ್ಲಾ ಚಿಗುರೊಡೆದು, ನಳನಳಿಸುತ್ತಿದ್ದವು. ಹಸುರು ಹುಲ್ಲುದಟ್ಟವಾಗಿ ಬೆಳೆದು ಬೆಂಗಾಡಿನಂತಿದ್ದ ಧರೆಯು ಹಸಿರುಡೆಯನ್ನುಟ್ಟಂತೆ ಕಂಗೊಳಿಸುತ್ತಿತ್ತು. ಎಲ್ಲೆಲ್ಲೂ ಸೊಬಗು ತಾನೇತಾನಾಗಿ ತಾಂಡವವಾಡುತ್ತಿತ್ತು. ಅಂದು ಮಳೆ ನಿಂತಿತಲ್ಲಾ ಎಂದು ಕಂಚಿ ನಗರದಲ್ಲಿದ್ದ ಜಂಗಮರೆಲ್ಲರೂ ಸಿರಿಯಾಳನಿಗೆ ಹೇಳದೆಯೇ ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದರು.

ಸಿರಿಯಾಳನು ಎಂದಿನಂತೆ ಪ್ರಾತರ್ವಿಧಿಗಳನ್ನು ಮುಗಿಸಿ, ಅನನ್ಯ ಭಕ್ತಿ ಭಾವದಿಂದ ಇಷ್ಟಲಿಂಗಾರ್ಚನೆಯನ್ನು ಮಾಡಿ, ಅತಿಥಿ ದೇವರನ್ನು ಸತ್ಕರಿಸಲು ಹೊರಗೆ ಬಂದು ನೋಡಿದನು. ದಿನದಿನವೂ ಆ ವೇಳೆಯುಲ್ಲಿ ಜಂಗಮರನ್ನು ಸಹಸ್ರ ಸಂಖ್ಯೆಯಲ್ಲಿ ನೋಡುತ್ತಿದ್ದ ಸಿರಿಯಾಳನಿಗೆ ಅಂದು ಒಬ್ಬರಾದರೂ ಕಾಣದೇ ಹೋದರು. ಅತಿಥಿಯಿಲ್ಲದ ಆ ಮನೆಯು

ಅಂದು ಅವನಿಗೆ ಶೂನ್ಯವಾಗಿ ತೋರಿತು. " ಅತಿಥಿಗಳನ್ನು ಸತ್ಕರಿಸುವುದರಲ್ಲಿ ನನ್ನಿಂದ ಏನು ಅಪಚಾರವಾಯಿತೋ ಚರಲಿಂಗರು ಬಾರದೇ ಇರುವುದಕ್ಕೆ, ಇದುವರೆಗೂ ಇದ್ದ ಅತಿಥಿಗಳೆಲ್ಲರೂ ಹೊರಟು ಹೋಗುವುದಕ್ಕೆ ಕಾರಣವೇನೋ?" ಎಂದು ತಳಮಳಿಸಿ, ವ್ಯಾಕುಲದಿಂದ ಕುದಿದನು. ಈ ವಿಚಾರವನ್ನು ತಿಳಿದು ಚಂಗಳೆಯೂ ಬಹಳ ಕಾತರಗೊಂಡಳು. "ಅತಿಥಿ ದೇವರನ್ನು ಇಚ್ಛಾನ್ನದಿಂದ ತೃಪ್ತಿಪಡಿಸುವ ತನ್ನ ಭಾಗ್ಯವು ಮಸಕಾಯಿತೇ" ಎಂದು ನೊಂದುಕೊಂಡು, ಪಟ್ಟಣದಲ್ಲಿ ಎಲ್ಲ ಸ್ಥಳಗಳಲ್ಲೂ ಜಂಗಮರಿಗಾಗಿ ಹುಡುಕಿಬರಬೇಕೆಂದು ಗಂಡನಿಗೆ ಸೂಚಿಸಿದಳು.

ಸಿರಿಯಾಳನು ಚಂಗಳೆಯ ಮಾತಿನಂತೆ ಜಂಗಮ ಶಿವಯೋಗಿಗಳಿಗಾಗಿ ಆ ಪಟ್ಟಣದ ಸಮಸ್ತ ಕೇರಿಗಳನ್ನೂ, ದೇವಾಲಯಗಳನ್ನೂ, ಉದ್ಯಾನ ಪುಷ್ಕರಣಿಗಳನ್ನೂ ಹುಡುಕಿ ಒಬ್ಬ ಜಂಗಮನಾಗಲಿ ಎಲ್ಲೆಲ್ಲಿಯೂ ತೋರಿ ಬರದಿರಲು ಕಳವಳದಿಂದ ಮುಂದುಗಾಣದೆ "ಶಿವ ಶಿವ, ಇಂದು ನನ್ನ ಪರೀಕ್ಷಾ ಸಮಯವು ಒದಗಿತೆ" ಎಂದು ಚಿಂತಿಸಿದನು. ಹೀಗೆ ಚಿಂತಿಸುತ್ತ, ಅಡಿಗಡಿಗೆ ಬಿಸುಸುಯ್ಯುತ್ತ, ಭೂರುದ್ರರನ್ನು ಹುಡುಕಿಕೊಂಡು ಊರು ಹೊರಗಿನ ಉದ್ಯಾನವನಕ್ಕೆ ಬಂದನು.

ಶಿವನು ಕಪಟ ಜಂಗಮನಾಗಿ, ಪಾರ್ವತಿಯು ಆ ಜಂಗಮನ ಮಾಯಾ ಪತ್ನಿಯಾಗಿ ಆ ವನದಲ್ಲಿ ಒಂದು ಸಂಪಗೆಯ ಮರದ ಅಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಆ ಜಂಗಮನು "ಶತವರ್ಷೀಯನೂ, ಜರಾ ಜರ್ಝರಿತ ದೇಹನೂ, ಬಲಿತ ಪಾಂಡು ಜಟಾಮಂಡಲನೂ, ರುದ್ರಾಕ್ಷ ಮಾಲಿಕಾಭಸಿತ ತ್ರಿಪುಂಡಾಲಂಕೃತನೂ, ಲಿಂಗ ಸೂತ್ರಧಾರಿಯೂ" ಆಗಿ ಹುಲಿಯ ಚರ್ಮದ ಮೇಲೆ ಮಲಗಿದ್ದನು. ಆ ಜಂಗಮನ ಪತ್ನಿಯು ಆ ವೃದ್ಧ ಶಿವಯೋಗಿಗೆ ಅನುರೂಪಳಾಗಿ ಕಣ್ಣು ಕಾಣದ ಹಣ್ಣು ಹಣ್ಣು ಮುದುಕಿಯಾಗಿ ಆತನ ಕಾಲುಗಳನ್ನೊತ್ತುತ್ತಿದ್ದಳು. ಸಿರಿಯಾಳ ಶೆಟ್ಟಿಯು ಅವರನ್ನು ಕಂಡು, ಎಡವಿದಲ್ಲಿಯೇ ನಿಧಿಯನ್ನು ಕಂಡ ಕಡು ಬಡವನಂತೆಯೂ, ಮೂಲಿಕೆಗಾಗಿ ಕಾಡೆಲ್ಲಾ ತೊಳಲಿ, ಬಳಲಿ, ಸಿಕ್ಕದೆ ಬಂದು ಬಾಗಿಲಲ್ಲೇ ಆ ವನಸ್ಪತಿಯನ್ನು

ಕಂಡವನಂತೆಯೂ, ಹಠಾತ್ತಾಗಿ ಕಣ್ಣು ಬಂದ ಹುಟ್ಟು ಕುರುಡನಂತೆಯೂ ಆನಂದ ಪುಳಕಿತನಾಗಿ, ಸಂಭ್ರಮದಿಂದಲೂ, ಭಕ್ತಿಯಿಂದಲೂ, ಭಯದಿಂದಲೂ ಅವರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಹಾಗೆ ನಮಸ್ಕಾರ ಮಾಡಿದ ಸಿರಿಯಾಳನನ್ನು ಆ ಶಿವಯೋಗಿಯು "ಶಿವ ಕಾರುಣ್ಯವು ಲಭಿಸಲಿ" ಎಂದು ಆಶೀರ್ವದಿಸಿದನು. ಸಿರಿಯಾಳನು ಜೋಡಿಸಿದ ಕೈಯನ್ನು ಮಸ್ತಕದಲ್ಲಿಟ್ಟುಕೊಂಡು "ದೇವರು, ಕರುಣೆ ದೋರಿ ದೇವಿಯರೊಡನೆ ಶಿವಾರ್ಚನೆಗೆ ನನ್ನ ಮನೆಗೆ ಬಿಜಯ ಮಾಡಿಸಿ ತಮ್ಮ ಪಾದರೇಣುವಿನಿಂದ ನನ್ನ ಗೃಹವನ್ನು ಪಾವನ ಮಾಡಿ, ನನ್ನನ್ನು ಚರಿತಾರ್ಥನನ್ನಾಗಿ ಮಾಡಬೇಕು" ಎಂದು ಪ್ರಾರ್ಥಿಸಿದನು. ಆ ವೃದ್ಧ ಜಂಗಮನು ಯಾವ ಮಾತನ್ನೂ ಆಡದೆ ಮೌನದಿಂದಿರಲು "ಪ್ರಭುವೆ, ನನ್ನ ಪ್ರಾರ್ಥನೆಗೆ ತಾವು ಮಾತೇ ಆಡುವುದಿಲ್ಲವಲ್ಲ. ಮಹಾನುಭಾವರಾದ ತಾವು ನನ್ನ ಆತಿಥ್ಯವನ್ನು ಸ್ವೀಕರಿಸಿ ಅನುಗ್ರಹಿಸಬೇಕು" ಎಂದು ಮತ್ತೆ ನಮ್ರತೆಯಿಂದ ಕೇಳಿಕೊಂಡನು.

ಪ್ರಾರ್ಥನೆಯನ್ನು ಆ ಮುದಿದವಸಿಯು ಸಾವಧಾನದಿಂದ ಕೇಳಿ, ಸಿರಿಯಾಳನನ್ನು ಆಪಾದ ಮಸ್ತಕವೂ ನೋಡಿ "ಅಪ್ಪಾ, ನೀನು ಯಾರು? ನಿನ್ನ ಹೆಸರೇನು? ನಿನ್ನ ಕುಲವು ಯಾವುದು?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಿರಿಯಾಳನು, "ಸ್ವಾಮಿ, ನಾನೊಬ್ಬ ಶಿವಭಕ್ತರ ಪಾದಧೂಳಿಯು. ಚತುರ್ಯುಗದಲ್ಲಿಯೂ ಪ್ರಸಿದ್ಧವಾಗಿರುವ ಸದ್ವೈಶ್ಯವಂಶದಲ್ಲಿ ಹುಟ್ಟಿದವನು. ಲಿಂಗಾಂಗಿ ದ್ವಿಜನು ನಾನು. ಶಿವಭಕ್ತರೆಲ್ಲ ನನ್ನನ್ನು ಸಿರಿಯಾಳನೆಂದು ಕರೆಯುತ್ತಾರೆ. ಶಿವಭಕ್ತರ ಪಾದಸೇವೆಯೇ ಘನವೆಂದು ತಿಳಿದಿದ್ದೇನೆ. ತಾವು ದೇವಿಯರೊಡನೆ ನನ್ನ ಮನೆಗೆ ಬಂದು ನನ್ನ ಅಲ್ಪ ಸೇವೆಯನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸಬೇಕು" ಎಂದು ನಮ್ರನಾಗಿ ನುಡಿದನು. ಆ ಮಾತುಗಳನ್ನು ಕೇಳಿ ಆ ಜಂಗಮನು ಅಚ್ಚರಿಪಟ್ಟವನಂತೆ "ಓಹೋ, ನೀನೇಯೋ ಸಿರಿಯಾಳನೆಂಬುವನು? ನೀನೇಯೋ ಅತಿಥಿಗಳನ್ನು ಇಚ್ಛಾನ್ನದಿಂದ ತೃಪ್ತಿಪಡಿಸುವನೆಂಬ ಕೀರ್ತಿ ಪಡೆದಿದುವವನು?" ಎಂದನು. ಅದಕ್ಕೆ,ಸಿರಿಯಾಳನು 'ಪ್ರಭುವೆ, ಎಲ್ಲವೂ ಶಿವನ, ಶಿವಭಕ್ತರ ಅನುಗ್ರಹ; ನಾನು ಎಷ್ಟು ಮಾತ್ರದ

ವನು. ಕೊಡುವವನೂ ಕೊಳ್ಳುವವನೂ ಶಿವನಲ್ಲದೆ ಬೇರೆಯಲ್ಲವೆಂದು ದೃಢವಾಗಿ ನಂಬಿರುವೆನು. ತಾವು ಪಾದವನ್ನು ಬೆಳೆಸಿ ನನ್ನ ಆತಿಥ್ಯವನ್ನು ಸ್ವೀಕರಿಸಬೇಕು" ಎಂದು ವಿಜ್ಞಾಪಿಸಿಕೊಂಡನು.

"ಅಯ್ಯಾ ಸಿರಿಯಾಳನೆ, ನಿನಗೆ ಮದುವೆಯಾಗಿರುವುದೆ? ನಿನಗೆ ಸಂತಾನವಿರುವುದೆ? ನಿನ್ನ ಹೆಂಡತಿಯು ನಿನ್ನ ಮಾತು ಕೇಳುವಳೆ?" ಎಂದು ಆ ತಪಸ್ವಿಯು ಮತ್ತೆ ಪ್ರಶ್ನೆ ಮಾಡಿದನು. ತನಗೆ ಮದುವೆಯಾಗಿರುವುದೆಂದೂ, ಪತ್ನಿಯು ತನ್ನನ್ನು ನೆರಳಿನಂತೆ ಅನುಸರಿಸುವಳೆಂದೂ ತನಗೆ ಪಿತೃಭಕ್ತನಾದ ಚೀಲಾಳನೆಂಬ ಚಿಕ್ಕ ಮಗನಿರುವನೆಂದೂ, ಸಿರಿಯಾಳನು ಉತ್ತರವಿತ್ತನು. ಮತ್ತು ಆರೋಗಣೆಗೆ ಮನೆಗೆ ಬಿಜಯ ಮಾಡಬೇಕೆಂದು ಮತ್ತೆ ಮತ್ತೆ ಬಹು ವಿಧವಾಗಿ ಪ್ರಾರ್ಥಿಸಿದನು.

ಆಗ ಆ ಮಾಯಾವಿ ಜಂಗಮನು, ಮಲಗಿದ್ದವನು ಅರ್ಧ ಎದ್ದು, "ಎಲೈ ಸಿರಿಯಾಳನೆ, ವ್ಯರ್ಥವಾದ ಮಾತುಗಳಿಂದ ಫಲವೇನು? ನಾನು ವಿಚಿತ್ರವಾದ ವ್ರತವೊಂದನ್ನು ಕೈಗೊಂಡಿರುವೆನು. ಆರು ತಿಂಗಳಿಗೊಮ್ಮೆ ಭೋಜನ ಮಾಡುವವನು ನಾನು. ಇಂದೇ ಆ ದಿನವು. ಪಶುಮಾಂಸವೇ ನನ್ನ ಆಹಾರ ನನ್ನೀ ವ್ರತವನ್ನು ನೀನು ಪೂರೈಸಬಲ್ಲೆಯಾ?" ಎಂದು ಕೇಳಿದನು.

"ಸ್ವಾಮಿ ನನ್ನ ಮನೆಯಲ್ಲಿ ಪಶುಗಳಿಗೆ ಕೊರತೆಯಿಲ್ಲ. ನೀವು ಯಾವ ಪಶುವಿನ ಮಾಂಸವನ್ನು ಬಯಸಿದರೂ ಸಲ್ಲಿಸುತ್ತೇನೆ" ಎಂದು ಸಿರಿಯಾಳನು ವಿಜ್ಞಾಪಿಸಿಕೊಂಡನು. ಅದಕ್ಕೆ ಜಂಗಮ ರೂಪಿಯಾದ ಶಿವನು "ನಾನು ಕೇಳುವುದು ಚತುಷ್ಪಾದ ಪಶುವನ್ನಲ್ಲ; ನರಪಶುವನ್ನು. ಅದರಲ್ಲೂ ಒಂದು ವಿಶೇಷವುಂಟು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂರು ವರ್ಣಗಳಲ್ಲಿ ಒಂದು ವರ್ಣಕ್ಕೆ ಸೇರಿದವನಾಗಿ, ಸರ್ವಗುಣ ಸಂಪನ್ನನೂ, ಸರ್ವಾಂಗ ಸುಂದರನೂ, ಅಂಗಭಂಗವಿಲ್ಲದ ಆರೋಗ್ಯವಂತನೂ, ಐದು ವರ್ಷ ವಯಸ್ಸಿನವನೂ, ತಂದೆ ತಾಯಿಯರಿಗೆ ಏಕಮಾತ್ರ ಪುತ್ರನೂ ಆದ ಬಾಲನಾಗಿರಬೇಕು. ಅಂತಹ ಪಶುವನ್ನು ತಂದೆತಾಯಿಗಳು ಶೋಕದಿಂದ ಕಣ್ಣೀರನ್ನು ಸುರಿಸದೆ, ದೈವವನ್ನು ದೂರದೆ, ಅತಿಥಿಯನ್ನು ನಿಂದಿಸದೆ, ಆತ್ಮಾನಂದದಿಂದ ತಾಯಿ

ಹಿಡಿದುಕೊಂಡಿರಲು ತಂದೆಯು ಖಂಡಿಸಿ ಪಾಕವನ್ನು ಮಾಡಿಸಬೇಕು. ಇಂತಹ ಪಶು ಮಾಂಸವನ್ನಲ್ಲದೆ ಬೇರೇನನ್ನೂ ನಾನು ಪರಿಗ್ರಹಿಸುವುದಿಲ್ಲ. ಇಂತಹ ಊಟವನ್ನು ನೀನು ಇಡುವೆಯಾ?" ಎಂದು ಕೇಳಿದನು.

ಆ ಜಂಗಮ ಮೂರ್ತಿಯ ಮಾತುಗಳನ್ನು ಸಿರಿಯಾಳನು ಭಯ ಭಕ್ತಿಯಿಂದ ಕೇಳಿದನು. ಕೇಳಿ, ಆನಂದದಿಂದ ಉಬ್ಬಿ, ಆ ಮಹಾತ್ಮನಿಗೆ ದಂಡಪ್ರಣಾಮವನ್ನು ಮಾಡಿ; ಎದ್ದು ನಿಂತು ಕೈ ಮುಗಿದುಕೊಂಡು ಗದ್ಗದಿತ ಕಂಠನಾಗಿ ಹೀಗೆ ಬಿನ್ನವಿಸಿದನು :—ಎಲ್ಲ ದೇವಮಾನವರೂ, ಸಮಸ್ತರೂ ಪಶುಗಳಾಗಿರುವಾಗ, ಶಿವನೊಬ್ಬನೇ ಆ ಪಶುಗಳ ಪಾಶವನ್ನು ಹರಿಸಬಲ್ಲವನಾಗಿರುವಾಗ ಅವನೇ ಸಮಸ್ತಕ್ಕೂ ಪತಿ ಎಂಬುದಾಗಿ ಪಶುಪತಿಯೆಂದು ಪರಸಹಸ್ರ ಶೃತಿಗಳ ನಮಸ್ಕರಿಸಿ ಹೇಳುತ್ತಿರುವಾಗ, ನಮ್ಮೆಲ್ಲರ ಪಶುತ್ವ, ಪಾಶಗಳು ನಾಶವಾಗುವ ಕಾಲ ಬಂದಿರುವಾಗ, ಶಿವರೂಪಿಯಾದ ಶಿವಯೋಗಿಯು ಏನನ್ನು ಕೇಳಿದರೂ ಕೊಡಲು ಏನನ್ನು ಮಾಡೆಂದರೂ ಮಾಡಲು ಸಿದ್ಧನಾಗಿರುವೆನು ಸ್ವಾಮಿ, ತಾವು ದಯಮಾಡಿಸಬೇಕು. ತಾವು ಹೇಳಿದ ನರಪಶುವಿಗೆ ನಾನು ದೂರ ಹೋಗಬೇಕಾದುದಿಲ್ಲ. ತಾವು ಈಗ ಕೋರಿದ ಲಕ್ಷಣಗಳೆಲ್ಲಾ ಇರುವ ನನ್ನ ಮಗ ಚೀಲಾಳನಿರುವನು. ಅವನನ್ನೇ ತಮಗೆ ಎಡೆ ಮಾಡುತ್ತೇನೆ. ಬಂದು ನಮ್ಮನ್ನು ಉದ್ಧಾರಮಾಡಬೇಕು" ಎಂದನು.

ಆ ಮಾತುಗಳನ್ನು ಕೇಳಿ ಆ ವೃದ್ಧ ಜಂಗಮನು "ಅಯ್ಯಾ, ನಿನ್ನದು ವ್ಯರ್ಥಾಭಿಮಾನವು. ಮಗನನ್ನು ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ಹೆತ್ತು ಅವನ ಮಲ ಮೂತ್ರಾದಿಗಳನ್ನು ಸ್ವಲ್ಪವೂ ಅಸಹ್ಯ ಪಡದೆ ತೆಗೆದು ಅವನಿಗಾಗಿ ಅನೇಕ ಕಷ್ಟಗಳನ್ನು ಅನುಭವಿಸುವ ತಾಯಿಗೆ ಇರುವ ವ್ಯಾಮೋಹವು ಸಾಮಾನ್ಯವಾದುದಲ್ಲ. ಆದುದರಿಂದ ನಿನ್ನ ಮಗನನ್ನು ಕೊಯ್ಸಿಡಲು ನಿನ್ನ ಪತ್ನಿಯು ಸಮ್ಮತಿಸುವಳೇ? ಎಲ್ಲ ಅಭಿಮಾನಗಳಿಗಿಂತಲೂ ಹೆಚ್ಚಿನದು ಪ್ರಾಣಾಭಿಮಾನವು. ಅಂತಹ ಪ್ರಾಣವನ್ನು ಕೊಡಲು ನಿನ್ನ ಮಗನು ಒಪ್ಪುವನೇ? ಮನಸ್ಸು ಬಹಳ ಚಂಚಲವಾದುದು. ಈಗ ನೀನು

ಮಗನನ್ನು ಕೊಡಲು ಒಪ್ಪಿ ಅನಂತರ ಹಿಂದು ಮುಂದು ನೋಡಬೇಕಾದೀತು! ವಾಗ್ದಾನ ಮಾಡಿ ಅನಂತರ ಇಕ್ಕಟ್ಟಿಗೆ ಸಿಕ್ಕಬೇಡ. ಮನೆಗೆ ಹೋಗಿ ನಿನ್ನ ಪತ್ನೀಪುತ್ರರ ಒಪ್ಪಿಗೆಯನ್ನು ಪಡೆದು ಬಾ''ಎಂದು ನುಡಿಯಲು, ತನ್ನ ಭಾರ್ಯೆಗಿರತಕ್ಕ ಶಿವಭಕ್ತಿ ವಿಶ್ವಾಸವನ್ನೂ, ಜಂಗಮಾರಾಧನ ನಿಯಮ ನಿಷ್ಠೆಯನ್ನೂ ತನ್ನ ಮಗನ ಪಿತೃಭಕ್ತಿ ವಿಧೇಯತೆಗಳನ್ನೂ ಬಹುವಿಧದಲ್ಲಿ ಹೇಳಿದರೂ ಆ ಕಪಟ ಯೋಗಿಯು ಒಡಂಬಡದಿರಲು ಹೆಂಡತಿಯನ್ನೂ, ಮಗನನ್ನೂ ಕೇಳಲು ಸಿರಿಯಾಳನು ಮನೆಗೆ ಬಂದನು.

ಶಿವಪೂಜಾ ಪರಿಕರಗಳೆಲ್ಲವನ್ನು ಸಿದ್ಧಮಾಡಿಕೊಂಡು ಅತಿಥಿಯ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಚಂಗಳೆಯು ಏಕಾಂಗಿಯಾಗಿ ಬಂದ ಸಿರಿಯಾಳನ ಮುಖಾರಾಗವನ್ನು ನೋಡಿ ದಿಗಿಲು ಬಿದ್ದು "ಭೂರುದ್ರರು ಯಾರೂ ದೊರಕಲಿಲ್ಲವೇ?" ಎಂದು ಬೆಸಗೊಂಡಳು. ಸಿರಿಯಾಳನು ಪತ್ನಿಗೆ ನಡೆದ ಎಲ್ಲಾ ಸಂಗತಿಗಳನ್ನೂ ಆದ್ಯಂತನಾಗಿ ತಿಳಿಸಿದನು. ಅದಕ್ಕೆ ಚಂಗಳೆಯು ನಸುನಕ್ಕು 'ಪ್ರಭುವೇ, ತಾವು ನನ್ನ ವಿಚಾರದಲ್ಲಿ ಹೀಗೆ ಯೋಚಿಸಬಹುದೆ? ನಮ್ಮ ಶರೀರ ಅರ್ಥ ಪ್ರಾಣಗಳೆಲ್ಲವೂ ಆ ಮಹೇಶನಿಗೇ ಸೇರಿದುದು. ಆತನಿಗೆ ನಾವು ಕೊಡುವುದೇನಿದೆ? ಆದುದರಿಂದ ಆ ಶಿವಯೋಗಿಯ ಇಚ್ಛಾನುಸಾರ ಚಿಲಾಳನನ್ನು ಸಂತೋಷದಿಂದ ಪಾಕಮಾಡಿ ಬಡಿಸೋಣ" ಎಂದಳು. "ಚಿಲಾಳನನ್ನೂ ಸಹ ಕೇಳಬೇಕೆಂದು ಆ ಶಿವಯೋಗಿಗಳ ಅಪ್ಪಣೆಯಾಗಿದೆ" ಎಂದು ಸಿರಿಯಾಳನೆನ್ನಲು ಚಂಗಳೆಯು "ಚೀಲಾಳನು ಒಡಂಬಡುವ ವಿಷಯದಲ್ಲಿ ಸಂಶಯ ಇಲ್ಲ. ಅವನು ನಮ್ಮ ಇಷ್ಟಕ್ಕೆ ಎಂದೂ ಅಡ್ಡಿ ಬಾರನು. ಜಂಗಮ ದಂಪತಿಗಳಿಗೆ ಸ್ನಾನಾದಿಗಳಿಗೆ ವೇಳೆ ಮೀರುವುದು. ಬೇಗ ಹೋಗಿ ಕರೆದುತನ್ನಿ" ಎಂದು ನುಡಿದಳು.

ಇತ್ತ ಜಂಗಮ ವೇಷಧಾರಿಯಾದ ಶಂಕರನು ಚೀಲಾಳನು ಓದುತ್ತಿದ್ದ ಶಾಲೆಗೆ ರೂಪಾಂತರದಿಂದ ಹೋಗಿ ನೋಡಲು ಚೀಲಾಳನು ಕೈಯ್ಯಲ್ಲಿ ಪುಸ್ತಕವನ್ನು ಹಿಡಿದು ನೀಲಕಂಠಸ್ತವವನ್ನು ಪಠಿಸುತ್ತ, ನಕ್ಷತ್ರಗಳ ಮಧ್ಯೆ ಹೊಳೆಯುವ ಉಡುರಾಜನಂತೆ ಪ್ರಕಾಶಿಸುತ್ತಿದ್ದನು. ಮಹಾದೇವನು

ಚೀಲಾಳನ ಹೊರತು ಮಿಕ್ಕವರಿಗೆ ಏನೂ ತಿಳಿದುಬರದಂತೆ ಮಾಯೆಯನ್ನು ಕವಿಸಿದನು. ಚೀಲಾಳನ ಎದುರು ನಿಂತನು. ಎದುರಲ್ಲಿ ತಪಸ್ವಿಯೊಬ್ಬನಿರುವುದನ್ನು ಕಂಡು ಚೀಲಾಳನು ಆತನ ಪಾದಗಳಲ್ಲಿ ಶಿರವಿಟ್ಟು ನಮಸ್ಕರಿಸಿದನು. ಆಗ ಆ ತಪಸ್ವಿಯು ಕಣ್ಣಿನಲ್ಲಿ ನೀರು ತಂದುಕೊಂಡು, ಮಗುವನ್ನು ತೋರಿ "ಮಗುವೇ, ನೀನು ಸಿರಿಯಾಳನ ಮಗನೇನು? ಆ ಕ್ರೂರಾತ್ಮನು ಇಂದು ನಿನ್ನನ್ನು ಒಬ್ಬ ರಾಕ್ಷಸ ಜಂಗಮನಿಗೆ ಕುಯಿದು ಊಟಕ್ಕಿಕ್ಕುವನು ಎಂಬುದನ್ನು ತಿಳಿದು ಈ ಅನರ್ಥವನ್ನು ನಿನಗೆ ತಿಳಿಸಲು ಬಂದೆನು. ಇಂತಹ ವಿಚಾರವನ್ನು ಅರಿತು ತಿಳಿಸದಿರುವುದು ಸಂಪನ್ನರ ಮಾರ್ಗವಲ್ಲವೆಂದು ಬಂದೆನು. ನಿನ್ನಂತಹ ಸುಕುಮಾರನೂ, ಕುಲವರ್ಧಕನೂ, ಸರ್ವಗುಣ ಸಂಪನ್ನನೂ ಆದ ಮಗನನ್ನು ಯಾವನೋ ಕುಡುಕ ಜೋಗಿ ಬೇಡಿದರೆ ಕೊಡುವ ತಂದೆ ಎಲ್ಲಿಯಾದರೂ ಉಂಟೇ? ಮಗುವೇ ಜಾಗ್ರತೆ ಓಡಿ ಹೋಗು. ಎಲ್ಲಿಯಾದರೂ ಅವಿತುಕೋ. ಆ ದುರಾತ್ಮನ ಕೈಗೆ ಸಿಕ್ಕಲೇ ಬೇಡ. "ಜೀವನ್ಭದ್ರಾಣಿ ಪಶ್ಯತಿ ಎಂಬಂತೆ ಏನಾದರೂ ಇರಲಿ ಜೀವವು ಭದ್ರವಾಗಿರಬೇಕು. ಬದುಕಿದ್ದರೆ ಎಂದಾದರೂ ಮಂಗಳವನ್ನು ನೋಡಬಹುದು, ಸುಖಿಸಬಹುದು. ಸತ್ತು ಪಡೆದ ಅಗ್ಗದ ಮೋಕ್ಷವು ಅದೇಕೆ? ಧಾರುಣಿಯ ಭೋಗವನು ಉಂಬುದಂ ಬಿಸುಟು ಸಾವುದರಿಂದ ಅತಿ ಕಷ್ಟಂ ಯಾವುದು" ಎಂದು ಹೇಳಿದನು. ಚೀಲಾಳನು ಆ ಭಯೋತ್ಪಾದಕ ಮಾತುಗಳಿಗೆ ಅಣುಮಾತ್ರವೂ ಅಂಜದೆ ನಕ್ಕು "ಒಡೆಯರೆ, ನೀವು ಹೇಳುವುದನ್ನು ಕೇಳಿ ನಾನು ಸ್ವಲ್ಪವೂ ಭಯಪಡುವುದಿಲ್ಲ. ನನ್ನ ಇಂಗಿತವನ್ನು ತಿಳಿಯದೆ ತಾವು ಹೇಳುತ್ತಿರುವಿರಲ್ಲಾ! ನೀವು ಹೇಳುವುದು ನಿಜವಾದರೆ ನಾನೇ ಧನ್ಯನು! ಅಧ್ರುವವಾದ, ಅನೇಕ ರೋಗ ರುಜಿನಗಳಿಗೆ ಆಕರವಾದ ಮಲಭಾಂಡದಂತಿರುವ ಶರೀರವು ಈಶ್ವರಾರ್ಪಣವಾದರೆ ಕಲ್ಪಾಂತರಧ್ರುವವಾದ ಕೀರ್ತಿಯು ದೊರಕುವುದು; ಎಂದಿದ್ದರೂ ಬಿದ್ದುಹೋಗುವ—ಕೆಡುವ ಶರೀರವು ಶಿವಾರ್ಪಣೆ ಸಂದರೆ ಅಹಾ! ಆ ಜನ್ಮದ ಸಾರ್ಥಕತೆ ಎಂತಹುದು! ನನ್ನ ತಂದೆತಾಯಿಯರು ನನ್ನನ್ನು ದಿವ್ಯ ಮುನೀಶ್ವರನಿಗೆ ಕುಯಿದು ಇಕ್ಕಿದರೆ ನಾನು ಧನ್ಯನಾಗುತ್ತೇನೆ. ಹಾಗೆ ಮಾಡುವುದರಿಂದ ಮಾತೃ ದೇವರಿಗೂ, ಪಿತೃ ದೇವರಿಗೂ, ಸಂತೋಷವನ್ನುಂಟುಮಾಡಿದಂತಾಗುತ್ತದೆ. ಅತಿಥಿ ದೇವರಿಗೆ ತೃಪ್ತಿಪಡಿಸಿ

ದಂತಾಗುತ್ತದೆ. ಈ ಭಾಗ್ಯವನ್ನು ಈಶನೇ ನನಗೆ ಕರುಣಿಸಿರುವಲ್ಲಿ ನಾನು ಅದನ್ನು ಕಳೆದುಕೊಳ್ಳಲಾರೆನು" ಎಂದು ಹೇಳಿದನು.

ಪರಮೇಶ್ವರನು ಆ ಬಾಲಕನ ಅಸಾಧಾರಣವಾದ ಜ್ಞಾನಕ್ಕೆ ಮೆಚ್ಚಿ ಸಂತೋಷಚಿತ್ತನಾಗಿ "ತಂದೆಯಲ್ಲಾಗಲಿ, ತಾಯಿಯಲ್ಲಾಗಲಿ, ಮಗನಲ್ಲಾಗಲಿ, ಸ್ವಲ್ಪವೂ ಕೊರತೆ ಇಲ್ಲ" ಎಂದು ಕೊಂಡಾಡಿ ಬಾಲಕನನ್ನು ಹರಸಿ, ಮುನ್ನಿನಂತೆ ಸಂಪಿಗೆಯ ಮರದ ಕೆಳಗೆ ಬಂದು ಮಲಗಿದನು. ಮತ್ತು ತನ್ನನ್ನು ನೋಡಿದುದೂ, ತನ್ನೊಡನೆ ಮಾತಾಡಿದುದೂ ಚೀಲಾಳನ ಸ್ಮೃತಿ ಪಥದಿಂದ ಸಂಪೂರ್ಣವಾಗಿ ಅಳಿಸಿಹೋಗುವಂತೆ ಮಾಡಿದನು.

ಅಷ್ಟರಲ್ಲಿ, ಸತಿಯ ಅಭಿಪ್ರಾಯವನ್ನು ತಿಳಿದುಬಂದ ಸಿರಿಯಾಳ ಶೆಟ್ಟಿಯು ಆ ವೃದ್ಧ ಜಂಗಮನಿಗೆ ನಮುಸ್ಕರಿಸಿ, ತನ್ನ ಭಾರ್ಯೆಯು ಮಗನನ್ನು ಅರ್ಪಿಸಲು ಅಭಿಪ್ರಾಯಪಟ್ಟುದನ್ನು ಬಿನ್ನವಿಸಿ ಆರೋಗಣೆಗೆ ದೇವಿಯರೊಡನೆ ದಯಮಾಡಿಸಬೇಕೆಂದು ಪ್ರಾರ್ಥಿಸಿದನು. ಆಗ ಕಪಟಜಂಗಮರೂಪಿಯಾದ ಪರಮೇಶ್ವರನು ಅವನ ಆಹ್ವಾನವನ್ನು ಒಪ್ಪಿ ವಿಭೂತಿಯ ಉಂಡೆಯನ್ನು ತೆಗೆದುಕೊಂಡನು. ಸಿರಿಯಾಳನು ಆನಂದಭರಿತನಾಗಿ ಪ್ರಬಲ ಕುಷ್ಠರೋಗ ಪೀಡಿತನಾದ ಆ ಅತಿಥಿಯನ್ನು ಹೆಗಲಮೇಲೆ ಕೂರಿಸಿಕೊಂಡು, ಕಣ್ಣು ಕಾಣದ ಜಂಗಮವ್ವೆಯು ಒಂದು ಕೈಲಿ ಕೋಲೂರಿ ಬರುತ್ತಿರಲು ಅವಳ ಮತ್ತೊಂದು ಕೈ ಹಿಡಿದು ಮೆಲ್ಲನೆ ನಡೆಸಿಕೊಂಡು ಮನೆಗೆ ಬಂದನು. ಚಂಗಳೆಯು ಮನೆಯ ಹೊರಬಾಗಿಲಲ್ಲಿ ಕಾದಿದ್ದು ನಿರ್ಮಲವಾದ ಪರಿಮಳಯುಕ್ತವಾದ ಶೀತಳೋದಕದಿಂದ ಅತಿಥಿ ದೇವರುಗಳ ಪಾದಗಳನ್ನು ತೊಳೆದಳು. ವಿನಯ, ಭಯಭಕ್ತಿ ಗೌರವಗಳಿಂದ ಸಿರಿಯಾಳ ಚಂಗಳೆಯರು ಆ ವೃದ್ಧ ದಂಪತಿಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಅವರ ಪಾದೋದಕವನ್ನು ಮಸ್ತಕದಲ್ಲಿ ತಳೆದರು. ದಾದಿಯಾದ ಚಂದನಿಕೆಯೂ ಅತಿಥಿ ದೇವರುಗಳಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆದಳು. ಕಾರಣೆ ಸಾರಣೆ ರಂಗೋಲೆಗಳಿಂದ ಚೆನ್ನಾಗಿ ಶೃಂಗರಿಸಿದ್ದ ಆ ಮನೆಯ ಒಳಕ್ಕೆ ಸಿರಿಯಾಳ ಚಂಗಳೆಯರು ಅವರನ್ನು ಕರೆದುಕೊಂಡು ಹೋಗಿ, ಭಯ ಭಕ್ತಿಯಿಂದ ಅನೇಕ ವಿನಯೋಕ್ತಿಗಳನ್ನು ಹೇಳಿ ಸತ್ಕರಿಸಿದರು. ಸಂಪಂಗಿ ಮೊದಲಾದ ಪುಷ್ಪಗಳ ಸುವಾಸನಾ

ಯುಕ್ತವಾದ ತೈಲಗಳನ್ನು ಹಚ್ಚಿ, ಪರಿಮಳೋದಕವೆರೆದು ಸೀಗೆಯ ಪುಡಿ, ಹೆಸರುಹಿಟ್ಟುಗಳನ್ನು ಹಾಕಿ ಉಜ್ಜಿ ಅಭ್ಯಂಗನ ಸ್ನಾನವನ್ನು ಮಾಡಿಸಿದರು ಅಭ್ಯಂಗನಸ್ನಾನಾನಂತರ ಅವರಿಗೆ ದಿವ್ಯದುಕೂಲಗಳನ್ನು ಕೊಟ್ಟು, ಅವರನ್ನು ಪೂಜಾಗೃಹಕ್ಕೆ ಬಿಜಯಮಾಡಿಸಿ, "ದೇವರು ಸಂಧ್ಯಾ ಶಿವಾರ್ಚನೆಗಳನ್ನು ಮಾಡುವುದರಲ್ಲಿ ಪಾಕವು ಸಿದ್ಧವಾಗುವುದು" ಎಂದು ಬಿನ್ನವಿಸಿಕೊಂಡರು. ಈ ಮಧ್ಯೆ ಜಂಗಮವ್ವೆಯು ಚಂಗಳೆಯನ್ನು ಏಕಾಂತದಲ್ಲಿ ನೋಡಿ, ಕಂಬನಿ ದುಂಬಿ "ಮಗಳೇ, ನಿನ್ನ ಮಗನನ್ನು ಕುಯ್ದಿಡಲು ನೀನೇಕೆ ಒಪ್ಪಿದೆ? ನಿನಗೆ ಮನಸ್ಸಾದರೂ ಹೇಗೆ ಬಂತು? ಹೆಂಗರುಳು ಹರಿದಿದೆಯೇ? ತಾಯ್ಗರುಳು ಕತ್ತರಿಸಿಹೋಗಿದೆಯೇ? ತಾಯಿಯಾದವಳೇ ಮಗನನ್ನು ವಧಿಸುವುದೆಲ್ಲಿಯಾದರೂ ಉಂಟೆ? ಈ ಜಂಗಮ ಜೋಗಿಯು ಯುಕ್ತಾಯುಕ್ತವನ್ನು ನೋಡದೆ ಕೇಳುವವನು; ಅವನ ಕೋರಿಕೆಗೆ ನೀವು ಸಮ್ಮತಿಸಬಹುದೆ? ಎಂದು ಬಹಳವಾಗಿ ವ್ಯಥೆಪಟ್ಟಳು. ಆಗ ಚಂಗಳೆಯು "ನೀವು ಯಾಕೆ ಇಷ್ಟು ಯೋಚನೆ ಮಾಡುತ್ತೀರಿ. ನೀವು ಶಿವಪೂಜೆಯನ್ನು ನಿರಾತಂಕದಿಂದ ಮಾಡಿ. ಸರ್ವಕ್ಕೂ ಕಾರಣನಾದ ಆ ಪಶುಪತಿಯ ಅಭೀಷ್ಟವನ್ನು ನಾವು ನೆರವೇರಿಸತಕ್ಕವರು" ಎಂದು ಸಮಾಧಾನಪಡಿಸಿದಳು.

ಅತಿಥಿ ದೇವರುಗಳನ್ನು ಶಿವಪೂಜಾಗೃಹದಲ್ಲಿ ಬಿಟ್ಟು ಬಂದು ಸಿರಿಯಾಳನು ಮಗನನ್ನು ಕರೆದುಕೊಂಡು ಬರಲು ಶಾಲೆಗೆ ಹೋದನು. ಸಿರಿಯಾಳನು ಗುರುವಿನ ಅಪ್ಪಣೆಯನ್ನು ಪಡೆದು ಮಗನನ್ನು ಎತ್ತಿ ಹೆಗಲ ಮೇಲೆ ಕೂರಿಸಿಕೊಂಡು ಮನೆಗೆ ಬಂದನು. ಮನೆಯಲ್ಲಿ ಚಂಗಳೆ ಸಿರಿಯಾಳರು ಮಗನಿಗೆ ಅತಿಥಿಯ ಅಪೇಕ್ಷೆಯನ್ನು ತಿಳಿಸುತ್ತ, "ಮಗುವೆ, ದಯಾಳುಗಳಧಿನಾಥನಾದ ಮಹೇಶ್ವರನು ಚರರೂಪಿಯಾಗಿ ಬಂದು ತನ್ನ ಪಾಶುಪತವ್ರತ ಸಮಾಪ್ತಿಯಾಗುವುದಕ್ಕೋಸ್ಕರವಾಗಿ ನಿನ್ನನ್ನು ಅಡಿಗೆ ಮಾಡಿ ಆಹಾರವಾಗಿ ಬಡಿಸಬೇಕೆಂದು ಹೇಳಿದ್ದಾನೆ. ನಾವೂ ಒಪ್ಪಿದ್ದೇವೆ. ನಿನ್ನ ಹೃದಯದಲ್ಲಿ ಸಂಸಾರದ ಮೇಲೆ ಏನಾದರೂ ಮೋಹವಿರುವುದೆ? ಹೇಳು" ಎಂದರು. ಮಾತಾಪಿತರ ಆ ಮಾತುಗಳನ್ನು ಕೇಳಿ ಚೀಲಾಳನು ಆನಂದಭರಿತನಾಗಿ "ಇಂದಿಗೆ ನನ್ನ ಸುಕೃತದ ರಾಶಿ ಫಲಿಸಿತು. ಇಂದಿಗೆ ಆ ಕಾಮಾರಿಯ ಕರುಣಾಲತೆಯು

ಪುತ್ರರು. ಇಂತಹದಕ್ಕೆ ಬೇಡವೆನ್ನುವವನು ನಾನಲ್ಲ. ನಿಮ್ಮ ವಂಶವು ಅಂತಹುದೇನು? ನೀವೇ ನನಗೆ ಗುರುಗಳು; ನಿಮ್ಮ ಮಾತೇ ನನಗೆ ವೇದ ವಾಕ್ಕು. ಮಹಾತ್ಮನಾದ ಶಿವಯೋಗಿಯು ಬಯಸಿದಂತೆ ನನ್ನನ್ನು ಆತನಿಗೆ ಸಮರ್ಪಣೆ ಮಾಡಿ. ತಮ್ಮ ಶರೀರವನ್ನು ಪರಾರ್ಥಕ್ಕಾಗಿ ವಿನಿಯೋಗಿಸಿದ ದಧೀಚಿ ಶಿಬಿ ಜೀಮೂತವಾಹನ ಇವರುಗಳಿಗೆ ಬುದ್ಧಿಯಿರಲಿಲ್ಲವೇ? ವ್ಯರ್ಥವಾಗಿ ಹೋಗುವ ಈ ದೇಹವು ಸದ್ವಿನಿಯೋಗವಾದರೆ ನಾನು ಕೃತಾರ್ಥನಾಗುತ್ತೇನೆ. ಆದುಕಾರಣ ಮಯೂಮಹಾಯೋಗಿ ರೂಪನಾಗಿರುವ ಶಿವನಿಗೆ ನನ್ನನ್ನು ಸಂತೋಷದಿಂದ ಸಮರ್ಪಿಸಿರಿ" ಎಂದನು.

ಸರ್ವ ಸುಗುಣಗಳಿಗೂ ಆಕರನಾದ ಆ ಬಾಲಕನ ನುಡಿಗಳಿಗೆ ಮಾತಾಪಿತರು ಬಹಳವಾಗಿ ಹರ್ಷಿಸಿದರು. ಚಂಗಳೆಯೂ ಚಂದನಿಕೆಯೂ ಬಹಳ ಸಂಭ್ರಮದಿಂದ ಚೀಲಾಳದೇವನನ್ನು ಮುತ್ತು ರತ್ನಖಚಿತವಾದ ಹಸೆಯ ಮೇಲೆ ಕುಳ್ಳಿರಿಸಿ ಸುಗಂಧ ತೈಲಗಳನ್ನೊತ್ತಿ, ತಿಳಿಯಾದ ಪರಿಮಳೋದಕದಿಂದ ಮಜ್ಜನವನ್ನು ಮಾಡಿಸಿ ತಲೆಬಾಚಿ ರತ್ನಾಭರಣಗಳನ್ನು ತೊಡಿಸಿ ದಿವ್ಯದುಕೂಲವನ್ನುಡಿಸಿ ವಿಭೂತಿ ರುದ್ರಾಕ್ಷಿ ಮಾಲೆಗಳಿಂದ ಅಲಂಕರಿಸಿ ಅವನನ್ನು ವಧಿಸುವ ಉಪಕರಣಗಳಿಂದ ಸಿದ್ಧವಾಗಿದ್ದ ಸ್ಥಳಕ್ಕೆ ಕರೆದುಕೊಂಡುಹೋದರು. ಸಿರಿಯಾಳನು ಚೀಲಾಳದೇವನನ್ನು 'ಅಕ್ಷಯವಾದ ಪದವಿಯು ನಿನಗೆ ಲಭಿಸಲಿ" ಎಂದು ಹರಸಿ "ಮಗುವೆ, ಶಂಕರನ ಪಾದಾರವಿಂದವನ್ನು ಮಾತ್ರ ಮರೆಯದಿರು. ಶಿವಮಂತ್ರವನ್ನು ಜಪಿಸುವುದನ್ನು ಬಿಡದಿರು. ಮಹೇಶ್ವರನಲ್ಲೇ ಮನವನ್ನು ನೆಟ್ಟಿರು. ನಿನಗೆ ಮಂಗಳವಾಗುವುದು" ಎಂದು ಉಪದೇಶಿಸಿದನು. ಅದರಂತೆಯೇ ಬಾಲನಾದ ಆ ಚೀಲಾಳದೇವನು ಕೇವಲ ಭಕ್ತಿ ಭಾವದಿಂದ ತ್ರಿಕರಣಶುದ್ಧನಾಗಿ, ಪರಶಿವನಲ್ಲೇ ನೆಟ್ಟ ಮನಸ್ಸುಳ್ಳವನಾಗಿ ಅನನ್ಯ ಭಾವದಿಂದ ಪ್ರಣವಪೂರ್ವಕ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದನು. ಚಂಗಳೆಯು ಮಗನ ಮೇಲಿನ ಪ್ರೇಮ ಸ್ನೇಹ ವಾತ್ಸಲ್ಯಗಳನ್ನು ಬಿಟ್ಟು, ಆ ಮುದ್ದು ಬಾಲಕನನ್ನು ತೊಡೆಯ ಮೇಲೆ ಮಲಗಿಸಿಕೊಂಡು ತನ್ನ ಕೈಗಳಿಂದ ಅವನ ಕೈಗಳನ್ನು ಬಲವಾಗಿ ಹಿಡಿದುಕೊಂಡಳು. ಚಂದನಿಕೆಯು ಚೀಲಾಳನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಆಗ ಸಿರಿಯಾಳನು ಹರಿತ

ವಾದ ಕತ್ತಿಯಿಂದ ಶಿವಧ್ಯಾನದಲ್ಲಿ ತಲ್ಲೀನನಾಗಿದ್ದ ಚೀಲಾಳನ ತಲೆಯನ್ನು ಕತ್ತರಿಸಿ ಕೆಡಹಿದನು. ಕತ್ತರಿಸಲ್ಪಟ್ಟ ಆ ಮಹಾಮಹಿಮನಾದ ಬಾಲಕನ ಶಿರವು "ಓಂ ನಮಶ್ಶಿವಾಯ" ಎಂದು ಪ್ರಣವಪೂರ್ವಕವಾದ ಶಿವಪಂಚಾಕ್ಷರಿಯನ್ನುಚ್ಚರಿಸುತ್ತಿದ್ದಿತು. ಆ ಮುಖಕಮಲವು ಸ್ವಲ್ಪವಾದರೂ ಕಂದಿರಲಿಲ್ಲ, ವಿಕಾರವಾಗಿರಲಿಲ್ಲ. ಮೆಲುನಗೆಯು ಅಳಿಸಿರಲಿಲ್ಲ. ಹಣೆಯಲ್ಲಿಟ್ಟ ವಿಭೂತಿಯು ನಿಚ್ಚಳವಾಗಿ ಪ್ರಕಾಶಿಸುತ್ತಿದ್ದಿತು. ಕಣ್ಣುಮುಚ್ಚಿ ಸುಖವಾಗಿ ನಿದ್ರೆ ಹೋಗುವ ಹಾಗೆ ಆ ಕುಮಾರ ಚೀಲಾಳದೇವನ ವಕ್ತ್ರ ಚಂದ್ರಮನು ಪ್ರಶಾಂತನಾಗಿದ್ದನು.

ಸಿರಿಯಾಳನು "ಕೇಶದೂಷಿತ"ವೆಂದು ಚೀಲಾಳನ ರುಂಡವನ್ನು ಬಿಟ್ಟು ಮುಂಡವನ್ನು ಸೀಳಿ ಮಾಂಸಖಂಡಗಳನ್ನು ತೆಗೆದು ತಿಳಿನೀರಿನಲ್ಲಿ ತೊಳೆದು ಪಾಕಮಾಡಲು ಸಿದ್ಧಪಡಿಸಿಕೊಟ್ಟನು. ಚಂಗಳೆಯೂ ಮಾದಿಯಾದ ಚಂದನಿಕೆಯೂ ಹೆಚ್ಚಾದ ಸಂತೋಷದಿಂದ ಆ ಮಾಂಸಖಂಡಗಳನ್ನು ಬೇಯಿಸಿ ನಂಜುನೀರನ್ನು ಚೆಲ್ಲಿ, ಸಮಸ್ತ ಸಂಬಾರಗಳನ್ನೂ ಸೇರಿಸಿ, ಶುಚಿಯಾಗಿಯೂ ರುಚಿಯಾಗಿಯೂ ಆ ಶಿಶುಮಾಂಸದಿಂದ ಷಡ್ರಸೋಪೇತವಾದ ಅಮೃತಸಾಕವನ್ನು ಮಾಡಿದರು,

ಅತಿಥಿ ದೇವರುಗಳು ಶಿವಾರ್ಚನೆಯನ್ನು ಮುಗಿಸಲು ಅವರನ್ನು ಊಟದ ಮನೆಗೆ ಕೈಹಿಡಿದು ಕರೆದುಕೊಂಡು ಬಂದು ಉತ್ತಮವಾದ ಆಸನಗಳ ಮೇಲೆ ಕುಳ್ಳಿರಿಸಿ, ಕೇವಲ ಶ್ರದ್ಧಾಭಕ್ತಿಗಳಿಂದ ಅರ್ಘ್ಯ ಪಾದ್ಯ, ಧೂಪ ದೀಪ, ಗಂಧ ಮಾಲಿಕೆಗಳಿಂದ ಅವರನ್ನು ಪೂಜಿಸಿ ಎಡೆಮಾಡಲು ಅಪ್ಪಣೆ ಪಡೆದು ರತ್ನ ಖಚಿತವಾದ ಪೀಠಗಳ ಮೇಲೆ ಬಂಗಾರದ ತಟ್ಟೆಯಲ್ಲಿ, ಪಾಯಸ, ಪರಮಾನ್ನ ಮೊದಲಾದ ಸಮಸ್ತ ಭಕ್ಷ್ಯ ಭೋಜ್ಯಗಳನ್ನೂ, ಚೀಲಾಳನ ಮಾಂಸದಿಂದ ಮಾಡಿದ ಶಾಖಪಾಕಗಳನ್ನೂ ಬಡಿಸಿ, "ಈ ಅಮೃತಾಹಾರವನ್ನು ಭಕ್ಷಿಸಿ ನಮ್ಮನ್ನು ಉದ್ಧರಿಸಿ" ಎಂದು ನಮಸ್ಕರಿಸಿ ಬಿನ್ನವಿಸಿಕೊಂಡರು.

ವೃದ್ಧ ಶಿವಯೋಗಿಯು ಭೋಜನಕ್ಕೆ ತೊಡಗುವ ಮೊದಲು ಎಡೆಯಲ್ಲಿ ಬಡಿಸಿದ್ದ ಮಾಂಸದ ಅಡಿಗೆಗಳನ್ನೆಲ್ಲ ಪರೀಕ್ಷಿಸಿ ನೋಡಿ, ಅದರಲ್ಲಿ ಶಿರೋ ಮಾಂಸವಿಲ್ಲದಿರಲು ಕುಪಿತನಾದನು. "ಸಿರಿಯಾಳ ಶೆಟ್ಟಿಯೇ, ನಿನ್ನ ನಿಜಗು ಣವು ಈಗ ತಿಳಿದಂತಾಯಿತು. ಪುತ್ರನ ಮೇಲಿನ ವ್ಯಾಮೋಹದಿಂದ ಶಿರವನ್ನು ಪಾಕಮಾಡದೆ ಉಳಿಸಿಟ್ಟುಕೊಂಡು, ಅಧಮಾಂಗ ಮಾಂಸದ ಅಡಿಗೆಗಳನ್ನು ಬಡಿಸಿರುವೆ. ನಿನ್ನಿಂದ ನನ್ನ ವ್ರತಭಗ್ನವಾಯಿತು. ಅಧಮಾಂಗದ ಈ ಮಾಂಸವನ್ನು ನಾನು ಊಟ ಮಾಡೆನು" ಎಂದನು. ಅತಿಥಿ ದೇವರ ಈ ಮಾತುಗಳನ್ನು ಕೇಳಿ ಸಿರಿಯಾಳ ಚಂಗಳೆಯರಿಗೆ ಸಿಡಿಲು ಬಡಿದಂತಾಗಿ ಒಬ್ಬರ ಮುಖವನ್ನೊಬ್ಬರು ನೋಡಿದರು. ಚಂದನಿಕೆಯು ಶಿವಯೋಗಿಯು ಆಡಿದ ಮಾತುಗಳನ್ನು ಕೇಳಿ, ಮರುಕ್ಷಣದಲ್ಲಿಯೇ ಚೀಲಾಳನ ಶಿರೋಮಾಂಸದಿಂದ ಮಾಡಿಟ್ಟ ಮೇಲೋಗರವನ್ನು ತಂದು ಕೊಟ್ಟು ಕೈ ಮುಗಿದು 'ಒಂದು ವೇಳೆ ಜಂಗಮಸ್ವಾಮಿಯು ಕೇಳಿದರೆ ಆಗ ಪಾಕ ಮಾಡು ವುದು ಸಾಧ್ಯವಿಲ್ಲವೆಂದೆಣಿಸಿ ಮೊದಲೇ ತಲೆಯನ್ನೂ ಪಾಕ ಮಾಡಿರುವೆನು" ಎಂದು ಬಿನ್ನವಿಸಿದಳು. ಆಗ ಸಿರಿಯಾಳ ಚಂಗಳೆಯರು ಶಿವಯೋಗಿಯ ಕೋಪಕ್ಕೆ ಕಾರಣವು ದೂರವಾಯಿತೆಂದು ಸಮಾಧಾನಗೊಂಡರು.

ಚಂಗಳೆಯು ತನ್ನ ಮಗನ ಶಿರೋಮಾಂಸವನ್ನೂ ಬಡಿಸಿದಳು. ಸಿರಿ ಯಾಳನು ಶಿರಬಾಗಿ "ದೇವಾ, ಕಾಲವು ಬಹಳವಾಯಿತು. ಅಡಿಗೆಯು ಆರಿ ಹೋಗುವುದು. ದಯವಿಟ್ಟು ಆರೋಗಿಸಬೇಕು" ಎಂದು ಹೇಳಿದನು.

"ಯಾವಯಾವ ರೀತಿಯಲ್ಲಿ ಪರೀಕ್ಷಿಸಿದರೂ ಈ ದಂಪತಿಗಳು ಸೋಲುವಂ ತಿಲ್ಲ. ಇವರ ಆತಿಥ್ಯೋಪಚಾರದಲ್ಲಿ ಒಂದಾದರೂ ಕೊರತೆ ಬಾರದು. ಆದರೂ ಮತ್ತೊಮ್ಮೆ ಪರೀಕ್ಷಿಸಿ ನೋಡುತ್ತೇನೆ" ಎಂದು ಪರಮೇಶ್ವರನು ಬಗೆದು ಸಿರಿ ಯಾಳನನ್ನು ಕುರಿತು "ಸಿರಿಯಾಳನೇ ಶಿವಭಕ್ತರು ಪಂಕ್ತಿಯಲ್ಲಿಲ್ಲದೆ ನಾನು ಊಟ ಮಾಡೆನು. ಯಾರಾದರೂ ಶಿವಭಕ್ತರನ್ನು ಬರಮಾಡು. ನನ್ನ ಜೊತೆಗೆ ಊಟಕ್ಕೆ ಕೂಡಲಿ" ಎನ್ನಲು ಸಿರಿಯಾಳನು ಅಪ್ರತಿಭನಾಗಿ ಸ್ವಾಮಿ, ಎಷ್ಟು ಅರಸಿದರೂ ಒಬ್ಬರಾದರೂ ಜಂಗಮರು ಈ ದಿನ ದೊರಕ

ಲಿಲ್ಲ. ಈಗ ಶಿವಭಕ್ತರನ್ನು ಕರೆತರುವುದು ಅಸಾಧ್ಯವು. ತಾವು ದಯವಿಟ್ಟು ಮನ್ನಿಸಿ ಭೋಜನ ಸ್ವೀಕರಿಸಿ ನಮ್ಮನ್ನು ಅನುಗ್ರಹಿಸಬೇಕು" ಎಂದು ಬಹು ವಿನಯದಿಂದ ಪ್ರಾರ್ಥಿಸಿದನು. ಆಗ ಪರಮೇಶ್ವರನು "ಆದಾಗದು, ಇರಲಿ, ನಿನಗಿಂತ ಶಿವಭಕ್ತರಿನ್ನುಂಟೇ? ನೀನೆ ನಮ್ಮೊಡನೆ ಊಟಕ್ಕೆ ಬಾ. ಮಗಳೇ, ನಿನ್ನ ಪತಿಗೂ ಒಂದು ಎಡೆಮಾಡು" ಎಂದು ಹೇಳಿದನು.

ಚಂಗಳೆಯು ಅಂತೆಯೇ ಗಂಡನಿಗೂ ಒಂದು ಎಡೆಮಾಡಿ ಮಗನ ಮಾಂಸವನ್ನು ತಂದು ಬಡಿಸಿದಳು. ಸಿರಿಯಾಳನು ಅಣುಮಾತ್ರವೂ ಅಳುಕದೆ ತನ್ನ ಮಗನ ಮಾಂಸವನ್ನು ಊಟಮಾಡಲು ಜಂಗಮನ ಆಣತಿಯಂತೆ ಕುಳಿತುಕೊಂಡನು.

ತನ್ನ ಮುದ್ದು ಕುವರನ ಮಾಂಸವನ್ನು ಆನಂದದಿಂದ ಊಟ ಮಾಡಲು ಕುಳಿತ ಸಿರಿಯಾಳನ ವೀರಭಕ್ತಿಗೆ ಮೆಚ್ಚಿದರು ಶಂಕರನು ಮತ್ತೂ ಪರೀಕ್ಷಿಸಿ ನೋಡಲು "ಮಕ್ಕಳನ್ನು ಬಿಟ್ಟು ತುತ್ತಿಡಲು ನಿನಗೆ ಹೇಗೆತಾನೇ ಮನಬರುವುದು? ಮಕ್ಕಳಿಲ್ಲದ ಮನೆಯು ಹಾಳು ಮನೆ. ಅಂತಹ ನಿರ್ಭಾಗ್ಯನ ಮನೆಯಲ್ಲಿ ನಾನಾದರೂ ಹೇಗೆ ಊಟ ಮಾಡಲಿ? ಮಕ್ಕಳಿಲ್ಲದ ಗತಿಕೆಟ್ಟ ಮನೆಯಲ್ಲಿ ಮತಿಗೆಟ್ಟು ನಾನು ಊಟಮಾಡಿ ನನ್ನ ಶೀಲವನ್ನು ಕಳೆದುಕೊಳ್ಳಲಾರೆನು. ನಿನ್ನ ಮಗನನ್ನು ನಮ್ಮೊಡನೆ ಊಟಕ್ಕೆ ಕರೆ" ಎಂದು ಸಿರಿಯಾಳನಿಗೆ ಹೇಳಿದನು.

ಮೊದಲಿನಿಂದಲೂ ಎಲ್ಲವನ್ನೂ ನೋಡುತ್ತಿದ್ದ ಸರ್ವ ಮಂಗಳೆಯು "ಆಹಾ! ಈ ಸಿರಿಯಾಳ ಜಂಗಳೆಯರಂತಹ ಭಕ್ತರನ್ನು ನಾನೆಲ್ಲಿಯೂ ನೋಡಲಿಲ್ಲ. ಶಂಭುವಾದರೂ ತನ್ನ ಭಕ್ತರನ್ನು ಎಷ್ಟು ಬಗೆಯಲ್ಲಿ ಪರೀಕ್ಷಿಸುತ್ತಾನೆ. ಕಾಡಿ ನೋಡಿದನು, ಮಗನ ಮಾಂಸವನ್ನು ಬೇಡಿ ನೋಡಿದನು. ಮಗನ ಮಾಂಸವನ್ನು ಭುಜಿಸೆಂದು ಹೇಳಿದನು. ಈಗ ಇಲ್ಲದ ಮಗನನ್ನು ಕರೆಯೆಂದು ಹೇಳುತ್ತಿರುವನು. ಆದರೂ ಈ ದಂಪತಿಗಳ ನಿಷ್ಠೆಯು ತಿಲಮಾತ್ರವೂ ಕಡಿಮೆಯಾಗದಿರುವುದು. ಈ ಭಕ್ತನು ತನ್ನ ದೇವನಿಗಾಗಿ ಸಮಸ್ತವನ್ನೂ ಸೋಲುತ್ತಿದ್ದಾನೆ, ಸೋತು ಗೆಲ್ಲುತ್ತಿದ್ದಾನೆ. ಈ ಪ್ರಭುವಿಗೆ ತಕ್ಕ ಭಕ್ತನಿ

ವನೇ'' ಎಂದು ಮನದಲ್ಲೇ ಮತ್ತೆ ಮತ್ತೆ ಸಿರಿಯಾಳನನ್ನು ಕೊಂಡಾಡಿದಳು. ಬಾಲಕನು ಊಟಕ್ಕೆ ಬಂದಲ್ಲದೆ ತುತ್ತಿಡೆನೆಂಬ ಆ ಕಪಟ ನಾಟಕ ಸೂತ್ರ ಧಾರಿಯ ಮಾತುಗಳನ್ನು ಕೇಳಿ ಸಿರಿಯಾಳ ಚಂಗಳೆಯರು ದಿಕ್ಕು ತೋಚದಂ ತಾದರು. ಆ ಶಿವಯೋಗಿ ಊಟವನ್ನು ಬಿಟ್ಟು ಎಲ್ಲಿ ಹೊರಟುಹೋಗುವನೋ ಎಂದು ಅವರು ಬಹಳವಾಗಿ ಹೆದರಿದರು. ಸಿರಿಯಾಳನು ಕೇವಲ ದೈನ್ಯದಿಂದ "ಪ್ರಭುವೆ ಅವನು ಈಗ ಒದಗುವುದಿಲ್ಲ. ದಯವಿಟ್ಟು ಆರೋಗಣೆ ಮಾಡಿ ಈ ಕೀಳಾಳನ್ನು ಕೃತಾರ್ಥನನ್ನಾಗಿ ಮಾಡಬೇಕು'' ಎಂದು ಪ್ರಾರ್ಥಿಸಿ ದನು. ಶಿವನು ದಯಾರ್ದ್ರಹೃದಯನಾಗಿ ಚಂಗಳೆಯನ್ನು ಕುರಿತು "ಚಂಗಳೆ ಬೀದಿಗೆ ಹೋಗಿ ನಾಲ್ಕು ದಿಕ್ಕುಗಳಲ್ಲೂ ಪರ್ಯಾಯ ಕ್ರಮವಾಗಿ ನಿನ್ನ ಮಗನ ಹೆಸರು ಹಿಡಿದು ಉಚ್ಚ ಕಂಠದಿಂದ ಕೂಗಿ ಕರೆ. ತಾಯಿ ಕರೆದರೆ ಯಾವ ಮಗನು ಬಾರದೇ ಇರುವನು'' ಎಂದು ಹೇಳಿದನು.

ಚಂಗಳೆಯು ಚರಮೂರ್ತಿಯ ಆ ವಾಕ್ಯಗಳನ್ನು ಕೇಳಿ, ನಂಬಿ ಮಹಾ ಪ್ರಸಾದವೆಂದು ಬೀದಿಗೆ ಹೋಗಿ, ಕೋಕಿಲೆಯ ಧ್ವನಿಯನ್ನೇಳಿಸುತ್ತಿದ್ದ ತನ್ನ ಮೃದು ಮಂಜುಳ ಸ್ವರದಿಂದ ಸೀಳ್ದನಿಯೆತ್ತಿ, "ಚನ್ನಿಗರಾಣ್ಮ ಬಾರ! ಸುಕುಮಾರಶಿರೋಮಣಿ ಬಾರ! ಶೈವಸಂಪನ್ನಗುಣಾಂಕ ಬಾ, ಬಾರ! ಶಿವಭೋಜ್ಯಕಳೇವರಬಾರ! ಶರಣರಕಯ್ಯಕನ್ನಡಿಯೆ ಬಾರ! ಪುರಾತನರ ಅಂಘ್ರಿ ರೇಣುವೆ ಬಾರ! ಶಿವತತ್ವಸುಧಾಕರಹಂಸ ಬಾರ! ಶಾಂಕರ ಮತಸಾರಚೂತಶುಕ ಬಾರಾ! ಕಲಿಸೂಧನ ಬಾ, ಬಾರ! ಭದ್ರ ಕಳಾನಿಧಿ ಬಾರ! ವಣಿಗ್ವಂಶವಾರಾಶಿಹಿಮಧಾಮ ಬಾರ! ಅಂದವಾಳ್ದ ಕುಲ ಭೂಷಣನೆ ಬಾರ! ಮಗನೇ, ಎನ್ನ ಕಣ್ಬೆಳಕೆ ಬಾರ! ಅಸಾರ ಸಂಸಾರ ದೂರ ಬಾರ! ಚೀಲಾಳ ಬಾ! ಶಿವನೊಡನುಣ್ಣ ಬಾರ! ಎಂದು ಪರ್ಯಾಯ ಕ್ರಮದಿಂದ ಎಲ್ಲ ದಿಕ್ಕುಗಳಿಗೂ ತಿರುಗಿ ಚಂಗಳೆಯು ಗಟ್ಟಿಯಾಗಿ ಕೂಗಿ ಕರೆದಳು. ಆಗ ಘಲಿಘಲಿರೆಂಬ ಕಿರುಗೆಜ್ಜೆಗಳ ನಾದವು ಕೇಳಬಂದಿತು. ಕೊರಲ ರತ್ನಹಾರಗಳು ತೊನೆದಾಡುತ್ತಿರಲು, ಕಿವಿಯುಲ್ಲಿಟ್ಟದ್ದ ಮಣಿ ಕುಂಡಲಗಳು ಅಲುಗಾಡುತ್ತಾ ಹೊಳೆಯುತ್ತಿರಲು, ಅರಳೆಲೆಯು ಕುಣಿ ದಾಡುತ್ತಿರಲು ಆಗತಾನೆ ಸ್ನಾನಮಾಡಿ ವಿಭೂತಿ ರುದ್ರಾಕ್ಷಿಗಳಿಂದ

ಅಲಂಕರಿಸಿಕೊಂಡವನಂತೆ, ಮಂಗಳಕರನಾಗಿ ಚೀಲಾಳನು ತಾಯಿಯ ಕಣ್ಗೆ ಕಂಡುಬಂದನು. ಓಡಿ ಬರುವ ಮಗನನ್ನು ಚಂಗಳೆಯು ಅತ್ಯಾನಂದದಿಂದ ಬಾಚಿ ತಬ್ಬಿ ಎತ್ತಿಕೊಂಡು ಮನೆಯೊಳಕ್ಕೆ ಅವಸರವಸರವಾಗಿ ಹೋಗಿ, ಮಗನನ್ನು ಅತಿಥಿಗಳ ಪಾದಕ್ಕೆ ಎರಗಿಸಿದಳು. ಸಿರಿಯಾಳ ಚಂಗಳೆಯರ ಆನಂದಕ್ಕೆ ಪಾರವಿಲ್ಲದಂತಾಯಿತು. ಅದು ಪುತ್ರವ್ಯಾಮೋಹದಿಂದಲ್ಲ; ಚೀಲಾಳನನ್ನು ಮತ್ತೊಮ್ಮೆ ಅಟ್ಟು ಶಿವಯೋಗಿಗೆ ಆರೋಗಣೆ ಮಾಡಿಸಬಹುದೆಂಬ ಮಹಾ ತ್ಯಾಗಬುದ್ಧಿಯಿಂದ. ಆಗ ಸಿರಿಯಾಳನು 'ದೇವಾ, ಚೀಲಾಳನು ಒದಗಿಬಂದಿರುವನು. ಅವನೂ ಪಂಙ್ತಿಯಲ್ಲಿ ಊಟ ಮಾಡುವನು. ತಾವು ಆರೋಗಿಸಬೇಕು' ಎಂದು ಪ್ರಾರ್ಥಿಸಲು ಸೂರ್ಯಾಗ್ನಿ ಚಂದ್ರರು ಒಟ್ಟು ಸೇರಿ ಬಂದಂತೆ ಮನೆಯಲ್ಲೊಂದು ದಿವ್ಯ ಪ್ರಕಾಶವು ಬೆಳಗಿತು! ಸ್ಫಟಿಕದಂತೆ ಸ್ವಚ್ಛವಾದ ತನುವುಳ್ಳವನೂ, ಚತುರ್ಭುಜನೂ, ವಿಷಕಂಠನೂ, ಫಾಲಲೋಚನನೂ ಗಂಗಾಮಂಡಿತ ಜಟಾಜೂಟನೂ, ಸರ್ಪಭೂಷಣನೂ, ಗಜಚರ್ಮಾಂಬರಧರನೂ ಆದ ಪರಶಿವನು, ಷೋಡಷ ವರ್ಷಕಳಾ ಪರಿಪೂರ್ಣನಾಗಿ, ವಾಮಭಾಗದಲ್ಲೊಪ್ಪುತ್ತಿರುವ ಜಗನ್ಮಾತೆಯಾದ ಪಾರ್ವತಿಸಮೇತನಾಗಿ ಅವರಿಗೆ ಪ್ರತ್ಯಕ್ಷನಾದನು. ದೇವತೆಗಳು ಆಕಾಶದಲ್ಲಿ ನಿಂತು ಹೂ ಮಳೆ ಕರೆದರು; ದೇವ ದುಂದುಭಿ ಮೊದಲಾದ ವಾದ್ಯಗಳು ಮೊರೆದವು. ಸಿರಿಯಾಳನಿಗೂ, ಚಂಗಳೆಗೂ, ಚೀಲಾಳನಿಗೂ ಮತ್ತು ದಾಸಿಯಾದ ಚಂದನಿಕೆಗೂ ಆದ ಆನಂದವು ವರ್ಣಿಸಲಶಕ್ಯವಾದುದು. ಅವರೆಲ್ಲರೂ, ಅನೇಕ ವಿಧದಲ್ಲಿ ಶಿವಶಿವೆಯರನ್ನು ಸ್ತೋತ್ರಮಾಡುತ್ತ, ಅಡಿಗಡಿಗೆ ನಮಸ್ಕರಿಸುತ್ತ, ಆ ಮಂಗಳ ಮೂರ್ತಿಗಳನ್ನು ಅನಿಮೇಷನಯನರಾಗಿ ನೋಡುತ್ತ; ಮೈಯುಬ್ಬಿ ಕೊರಳ ನರಗಳುಬ್ಬಿ 'ದೇವಾ, ಕರುಣಾಕರನೆ, ಶಂಕರನೆ, ಭಕ್ತವತ್ಸಲನೆ, ರಕ್ಷಿಸು ರಕ್ಷಿಸು' ಎಂದು ಅನೇಕ ವಿಧವಾಗಿ ಬೇಡಲು ಶಿವಶಿವೆಯರು ಅವರನ್ನು ಕೃಪಾಕಟಾಕ್ಷದಿಂದ ನೋಡಿ, ಅವರನ್ನು ಹರಸಿ, "ಮೆಚ್ಚಿದೆವು, ಸಿರಿಯಾಳ; ನಿನ್ನ ವೀರಭಕ್ತಿಗೆ ಮೆಚ್ಚಿದೆವು. ಸಿರಿಯಾಳ! ನೀನು ತುಂಬುರನೆಂಬ ಪ್ರಮಥನು. ಚೀಲಾಳನು ಕುಮಾರ ಸ್ವಾಮಿಯು. ನೀವು ಒಂದೊಂದು ಕಾರಣದಿಂದ ಮರ್ತ್ಯಲೋಕದಲ್ಲಿ

ಜನಿಸಿದಿರಿ. ಸಿರಿಯಾಳ, ನೀನು ಮಹಾ ತ್ಯಾಗಿಯಾಗಿ ಜಂಗಮಲಿಂಗ ವೀರನೆನಿಸಿದೆ. ನೀವಿನ್ನು ಸಕಾಯರಾಗಿ ಕೈಲಾಸಕ್ಕೆ ಬನ್ನಿ. ಬಂದು ನನ್ನ ಸಭೆಯಲ್ಲಿ ನನ್ನನ್ನು ಓಲೈಸಿರಿ" ಎಂದು ಹೇಳಲು ಸಿರಿಯಾಳನು ಭಯಭಕ್ತಿ ಗೂಡಿ ನಮಸ್ಕರಿಸಿ, "ಪ್ರಭುವೇ, ಕಾಂಚೀ ನಗರದ ಏಳು ಕೇರಿಗಳಲ್ಲೂ ಸಹಸ್ರ ಋಷಿ ಗೋತ್ರದ ನನ್ನ ಬಂಧುಗಳಿದ್ದಾರೆ. ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಾವು ಒಬ್ಬರನ್ನೊಬ್ಬರು ಎಂದೂ ಅಗಲಿಲ್ಲ. ಅವರನ್ನು ಬಿಟ್ಟು ಬರಲು ನನಗೆ ಮನಬಾರದು. ದೇವಾ, ಅವರನ್ನೂ ಅನುಗ್ರಹಿಸು" ಎಂದು ಬೇಡಲು, ಮಹೇಶ್ವರನು ಹಾಗೆಯೇ ಆಗಲೆಂದು ನಂದೀಶ್ವರನು ವಿಮಾನಗಳನ್ನು ಕರೆತರುವಂತೆ ಮನದಲ್ಲಿ ನೆನೆದನು. ಮನೋವೇಗದಿಂದ ನಂದೀಶ್ವರನು ವಿಮಾನಗಳೊಡನೆ ಸಿದ್ಧವಾಗಿ ಬಂದನು. ಶಿವನು ಆ ನಂದೀಶ್ವರನಿಗೆ ಕಾಂಚೀ ನಗರದಲ್ಲಿದ್ದ ಸಿರಿಯಾಳನ ಬಂಧುಗಳನ್ನೆಲ್ಲಾ ವಿಮಾನದಲ್ಲಿ ಕರೆತರುವಂತೆ ಆಜ್ಞಾಪಿಸಿ, ತಾನು ಪಾರ್ವತೀ ಸಮೇತನಾಗಿ, ಸಿರಿಯಾಳ, ಚಂಗಳೆ, ಚೀಲಾಳ ಚಂದನಿಕೆಯರೊಡನೆ ವಿಮಾನವನ್ನು ಹತ್ತಿ ದೇವ ದುಂದುಭಿಗಳು ಮೊಳಗುತ್ತಿರಲು, ವಿಮಾನವನ್ನು ಅಂತರಿಕ್ಷಕ್ಕೆ ಹಾರಿಸಿ, ನಂದೀಶ್ವರನು ಕಂಚಿಯ ಜನರೊಡನೆ ಇನ್ನೊಂದು ವಿಮಾನದಲ್ಲಿ ಕುಳಿತು ಹಿಂಬಾಲಿಸಿಬರುತ್ತಿರಲು, ಕ್ಷಣಮಾತ್ರದಲ್ಲಿ ಕೈಲಾಸಕ್ಕೆ ಹೋಗಿ ಸೇರಿದನು

ಕಣ್ಗೆ ಮಂಗಳವಾದ, ಮನಕ್ಕೆ ಮನೋಹರವಾದ, ನುಡಿಗೆ ನವೀನವಾದ, ಮಯ, ಪಾಂಡ್ಯ, ವಿಶ್ವಕರ್ಮಾದಿ ಶಿಲ್ಪಿಗಳ ಕಲ್ಪನೆಯನ್ನು ಕೀಳುಮಾಡಿ, ಮಂಜುಳಮಯ ರಂಜನೆವೆತ್ತ, ಸಚ್ಚಿದಾನಂದಮಯವಾಗಿದ್ದ ಮಹಾ ಕೈಲಾಸದಲ್ಲಿ ಮಹಾದೇವನರಮನೆಯು, ಚತುರ್ವೇದ ಮಯವಾದ ಚತುರ್ದ್ವಾರಗಳಿಂದ, ದೇದೀಪ್ಯಮಾನವಾಗಿ ವರ್ಣಿಸಲಶಕ್ಯವಾಗಿದ್ದಿತು. ಆ ಮಹಾಮಂದಿರದಮಧ್ಯದಲ್ಲಿ ಸರ್ವೇಂದ್ರಿಯ ಸ್ಥಂಭಕವಾದ, ಸರ್ವೇಶ್ವರನಾದ ತಾಂಡವೇಶ್ವರನ ಸಭಾ ಮಂಟಪವು ಪರಿಶೋಭಿಸುತ್ತಿತ್ತು. ಆ ಮಂಟಪದ ನಡುವೆ ಕೋಟಿ ಸೂರ್ಯ ಪ್ರಭೆಯನ್ನು ಕೀಳ್ಪಡಿಸುವ ದಿವ್ಯ ಸಿಂಹಾಸನವು ಲಕ್ಷ ಯೋಜನ ವಿಶಾಲೋನ್ನತವಾಗಿ ಒಪ್ಪುತ್ತಿತ್ತು. ಹರಿಬ್ರಹ್ಮೇಂದ್ರಾದಿ ದೇವ

ಸಮೂಹವೂ, ನಂದೀಶ್ವರ ಭೃಂಗೀಶ್ವರ ಮೊದಲಾದ ರುದ್ರಗಣ ಪ್ರಮಥ
ಗಣ, ದೇವಗಣ ಭಕ್ತಗಣಗಳೆಂಬ ಅಸಂಖ್ಯಾತ ಗಣಸಮೂಹವೂ
ಅಲ್ಲದೆ, ಅರುಂಧತಿ, ಅನುಸೂಯ ಮೊದಲಾದ ಏಕಾದಶ ಮಹಾ ಪತಿವ್ರತೆ
ಯರೂ, ಶಿವಮುಕ್ತಿ ಕಾಂತೆಯರೂ, ಸಾವಿತ್ರ್ಯಾದಿ ಮಂತ್ರ ಶಕ್ತಿಯರೂ,
ಮೈವೆತ್ತು ಬಂದು ನುತಿಸುತ್ತಿರುವ ಸಕಲವೇದವೇದಾಂಗಶೃತ್ಯಾಗ
ಮಾದಿಗಳೂ, ಕೈವಾರಿಸುವ ಮನುಗಳೂ, ಪರಿಯರಿತು ಪರಿಚರಿಸುವ
ಸರಸ್ವತಿ, ಲಕ್ಷ್ಮಿ, ಶಚಿದೇವಿಯರೇ ಮೊದಲಾದ ದೇವತಾ ಸ್ತ್ರೀಯರೂ,
ಶಿವಲೋಕ ಸೌಖ್ಯಾತಿರೇಕರಾದ ಶಿವಯೋಗಿಗಳೂ, ಲಾವಣ್ಯಸುಕುಮಾರತೆ
ಗಳೊಡಗೂಡಿದಂತೆ ದಿವ್ಯಶರೀರಧಾರಿಗಳಾಗಿ ಬಂದಿದ್ದ ಮಹಾ ಪುಣ್ಯ
ನದಿಗಳೂ, ತುಂಬರ ನಾರದರೂ, ಭರತಾದಿ ಮುನಿಗಳೂ, ಊರ್ವಶಿ, ರಂಭೆ
ಮೊದಲಾದ ದೇವ ನರ್ತಕಿಯರೂ, ಆ ಸಭೆಯಲ್ಲಿ ಕಿಕ್ಕಿರಿದು ನೆರೆದು,
ಚೋಳ ಮಂಡಲಕ್ಕೆ ಗಮಿಸಿದ ಶಂಕರನ ಬರವನ್ನೇ ಎದುರು ನೋಡುತ್ತಿದ್ದರು.
ಹೀಗೆ ಸಭೆಯು ಸರ್ವೇಶ್ವರೇಶ್ವರ ನಿರೀಕ್ಷಣೆಯಲ್ಲಿರಲು ಉಮಾದೇವಿಯಿಂದೊಡ
ಗೂಡಿದ ಮಹೇಶ್ವರನು ಸಿರಿಯಾಳ, ಚಂಗಳೆ, ಚೀಲಾಳ ಚಂದನಿಕೆಯರೊಡನೆ
ಸಭೆಯನ್ನು ಪ್ರವೇಶಿಸಿದನು. ನಂದೀಶ್ವರನು ಕಾಂಚೀ ನಗರದಿಂದ ಬಂದಿದ್ದ
ಇತರರನ್ನೂ ಸಭೆಗೆ ಕರೆತಂದನು. ದೇವದೇವೇಶನು ಸಭೆಗೆ ಬಿಜಯ
ಮಾಡಲು ಸಮಸ್ತ ಸಭಿಕರೂ ಎದ್ದು, ಕೈ ಮುಗಿದು, ಜಯಜಯಾಕಾರವನ್ನು
ಮಾಡಿದರು. ವೇದವೇದಾಂಗಗಳು ಮಂಗಳವನ್ನು ಘೋಷಿಸುತ್ತಿರಲು, ಹರಿ
ಅಜ ಇಂದ್ರಾದಿಗಳು ಸಂಭ್ರಮಯುಕ್ತರಾಗಿ ಪೊಡಮುಡುತ್ತಿರಲು, ದೇವ
ಮುನಿಗಳು ಆಶ್ಚರಿಯ ಬಿಡುಗಣ್ಣಿಂದ ನೋಡುತ್ತಿರಲು, ಮಹಾದೇವನು
ಮಂದಹಾಸಯುಕ್ತನಾಗಿ, ಸಿರಿಯಾಳನನ್ನು ಕೈಹಿಡಿದು ಸಿಂಹಾಸನವಿದ್ದಲ್ಲಿಗೆ
ಕರೆದುಕೊಂಡು ಹೋಗಿ, ಗಣಪದವಿಯನ್ನಿತ್ತು; ಸಿಂಹಾಸನದ ಅಡಿಯಲ್ಲಿದ್ದ
ದಿವ್ಯಪೀಠಗಳಲ್ಲಿ ಕುಟುಂಬವೆರಸಿ ಕುಳ್ಳಿರಲು ತೋರಿ, ಕಂಚಿಯಿಂದ ಬಂದ
ಇತರರಿಗೆ ರುದ್ರ ಪದವಿಯನ್ನು ಕರುಣಿಸಿ, ಗಿರಿಜೆಯೊಡನೆ ಸಿಂಹಾಸನಾರೋ
ಹಣ ಮಾಡಿ ಕುಳಿತು, ಕನಕಸಭಾಪತಿಯಾಗಿ ಮೆರೆದನು. ಮಹಾ
ದೇವನ ಅಪ್ಪಣೆಯಂತೆ ವೇತ್ರಹಸ್ತನಾದ ನಂದೀಶ್ವರನು ಎಲ್ಲರನ್ನೂ ಕುಳಿತು
ಕೊಳ್ಳುವಂತೆ ಸಂಜ್ಞೆ ಮಾಡಲು, ಸಮಸ್ತ ದೇವಾದಿ ಸಭಾಸದರೂ ತಮ್ಮ
ತಮ್ಮ ಆಸನಗಳಲ್ಲಿ ಮಂಡಿಸಿದರು.

ಆಗ ಮಹಾದೇವನಾದ ಶಿವನು ಹರಿ ಬ್ರಹ್ಮ ಮೊದಲಾದವರಾದಿಯಾಗಿ ನೆರೆದ ಸಭೆಯವರೆಲ್ಲರಿಗೂ, ಸಿರಿಯಾಳನ ವೃತ್ತಾಂತವನ್ನು ಹೇಳಲಾರಂಭಿಸಿದನು. ಆ ವೃತ್ತಾಂತವನ್ನು ಹೇಳುತ್ತ ಹೇಳುತ್ತ ತನ್ನ ಸಿಂಹಾಸನದಿಂದ ಇಳಿಯುತ್ತ ನೆರೆದ ದೇವತೆಗಳಿಗೆಲ್ಲರಿಗೂ ಸಿರಿಯಾಳನನ್ನು ತೋರುತ್ತ, ಹಿಗ್ಗುತ್ತ, ವೀರಭಕ್ತನಂ ನೋಡಿರೆಂದು, ಹಿಂದಿಲ್ಲದ ಮುಂದಿಲ್ಲದ ಭಕ್ತನಿವನೆಂದು, ಸಭಿಕರೆಲ್ಲರ್ಗೆ ತೋರಿ ತೋರಿ ಉಬ್ಬುತ್ತ, ಸಲ್ಲೀಲೆಯಿಂದ ಕೊಂಡಾಡುತ್ತ, ಅವನನ್ನು ಅಪ್ಪಿ "ನನ್ನ ಸದ್ಭಕ್ತನಂ ನೋಡಿರೇ! ತನ್ನ ಮುದ್ದು ಕುಮಾರನನ್ನು ಕೊಂದಿಟ್ಟ ನಿಸ್ಸೀಮ ಭಕ್ತನನ್ನು ನೋಡೀ ಎನ್ನುತ್ತ, ಇನ್ನುಂಟೆ? ಇಂಥವರುಂಟೇ? ಮಗನ ಉಣ್ಣಲಿಟ್ಟವರುಂಟೆ? ಇಂತುಂಟೇ? ಎನ್ನ ನೇಮಕೆ ತಮ್ಮ ತನೂಭವನಂ ಸಮೆಸಿದವರುಂಟೇ? ನೋಡಿರೇ, ಎನ್ನ ಭಕ್ತರ ಮಹಿಮೆಯನ್ನು ವರ್ಣಿಸಲಶಕ್ಯ. ಬಲ್ಲದರವರ್! ಅಹಾ, ವೀರರೆನ್ನ ಭಕ್ತರು! ಆಹಾ ಮುಗ್ಧರೆನ್ನ ಭಕ್ತರು! ಆಹಾ ಛಲಗಾರರೆನ್ನ ಭಕ್ತರು! ಅವರ ಸಾಟಿಯುಂಟೇ? ಈ ಎನ್ನ ಭಕ್ತರಿಂ ನಾನು ಸಿರಿಯನಾದೆ, ಎನಗುಂ ಸಿರಿಯುರವರೆನಿಸಿದರ್" ಎಂದು ಮೈನವಿರೇಳೆ, ತೂಗುತ್ತ, ತೊನೆಯುತ್ತ, ಆನಂದಾಧಿಕ್ಯದಿಂದ ತೂಗಿ ತೂಗಿ ಹಿಂದಕ್ಕೂ, ಮುಂದಕ್ಕೂ ತೊನೆದಾಡುತ್ತಿದ್ದನು. ಹಾಗೆ ಹಿಂದಕ್ಕೂ ಮುಂದಕ್ಕೂ ತೂಗಿ ತೂಗಿ ತೊನೆತೊನೆದು ಆಡಿಯಾಡಿ ಕುಣಿಯಲು ಮೊದಲಿಟ್ಟನು. ಶಿವನು ಕುಣಿಯಲು ಮೊದಲಿಡಲು ಸಭೆಯಲ್ಲಿ ಅಚ್ಚರಿಯು! ಮಹದಚ್ಚರಿಯ ಮಹದೈಸಿರಿಯು! ಮಹದದ್ಭುತದ ಅವರ್ಣನೀಯ ಪರಿವರ್ತನೆಯಾಯಿತು. ಪರಶಿವನು ಪಂಚವಕ್ತ್ರನಾಗಿ, ದಶ ಪಂಚವಿಲೋಚನನಾಗಿ, ದಶಭುಜನಾಗಿ, ಘಂಟೆ ಪಿನಾಕ ಖಟ್ವಾಂಗ ಡಮರುಗ ನಾಗ ಮೃಗ ವೀಣಾ ಬಾಣ ಕಮಲ ಶೂಲಧರನಾಗಿ, ವ್ಯಾಘ್ರ ಚರ್ಮೋತ್ತರೀಯನಾಗಿ, ಗಜಚರ್ಮಾಂಬರ ಧಾರಿಯಾಗಿ, ಮಹಾ ನಾಗಭೂಷಣನಾಗಿ ಮಹಾ ನರ್ತನದಲ್ಲಿ ತೊಡಗಿದನು. ಸಮಸ್ತ ವರ್ಣ ಮಾಲೆಗೂ ಜನ್ಮಸ್ಥಾನವಾದ ಪರಶಿವನ ಹಸ್ತದಲ್ಲಿರುವ ಡಮರುಗ ಧ್ವನಿಯು ಮಹಾ ಮೇಘಗಳ ಧ್ವನಿಯನ್ನೂ, ಕೋಟಿ ವಜ್ರಾಯುಧ ಧ್ವನಿಯನ್ನೂ ಮೀರಿಸಿ ಶಬ್ದಮಾಡುತ್ತಿರಲು; ಮಹಾದೇವನ ಮುಡಿಯೊಳಗಣ ದೇವ ಗಂಗೆಯು ಮುತ್ತುಗಳ ಮಳೆ ಸುರಿ

ವಂತೆ ಜಾರಿ, ಹಾರಿ, ಸಿಡಿದು ಸುರಿಯುತ್ತಿರಲು; ಮೆರೆವ ಕೆಂಜೆಡೆಯು ಗಗನವಲ್ಲೆಲ್ಲಾ ಹಬ್ಬಿ ಹರಡಿರಲು; ಆ ಮಹಾಬ್ರಾಹ್ಮಣನು ಯಜ್ಞೋಪವೀತವಾಗಿ ಧರಿಸಿರುವ ಅನಂತನೂ, ಕೈಬಳೆಯಾಗಿರುವ ವಾಸುಕಿಯೂ, ಉಡುದಾರವಾಗಿರುವ ತಕ್ಷಕನೂ, ಹಾರವಾಗಿರುವ ಕಾರ್ಕೋಟಕನೂ, ಶಿರೋಭೂಷಣವಾಗಿರುವ ಶಂಖ ಪಾಲನೂ, ಉದರಾಭರಣನಾಗಿರುವ ಕುಟಿಕನೂ, ಕಡಕುಗಳಾಗಿರುವ ಪದ್ಮ ಮಹಾಪದ್ಮರೂ ತಾಳವನ್ನನುಸರಿಸಿ ಭುಸು ಭುಸು ಭುಸ್ ಎನ್ನುತ್ತಿರಲು ; ಪರಮೇಶ್ವರನ ಪಂಚ ಮುಖದ ಉರಿಗಣ್ಣುಗಳಿಂದ ಛಿಟಿಲ್ ಛಿಟಿಲೆಂದು, ನಿಟಿಲ್ ನಿಟಿಲೆಂದು ಸ್ಫುಲಿಂಗ ವಿಸ್ಫುಲಿಂಗಗಳು ಹಾರುತ್ತಿರಲು; ಭರ್ಗನ ದಶ ಬಾಹುಗಳು ಎಲ್ಲ ದಿಕ್ಕುಗಳಲ್ಲೂ ಓಲಾಡುತ್ತಿರಲು; ಶಿವನ ಕೈಯ ಬ್ರಹ್ಮ ಕಪಾಲವು ತಾಳ ಗುಟ್ಟಿದಂತೆ ರಕ್ಷ ರಕ್ಷವೆನ್ನುತ್ತಿರಲು ; ಘಂಟೆಯು ಡಂಡಣಂ ಢಣಢಣವೆನ್ನುತ್ತಿರಲು; ಕಾಲಂದಿಗೆಯು ಘುಲುಕು ಘುಲುಕು ಘುಲುಕೆನಲು; ಹರಿಯ ನಯನದ ಕುರುಹು ಹಿಡಿದ ಭರ್ಗನ ಪಾದದ ಗೆಜ್ಜೆಗಳ ಧ್ವನಿಗೆ ದಿಕ್ಕುಗಳು ಬಿರಿಯಲು ; ಮಹೇಶನ ಪದನಖವು ಸಹಸ್ರಕೋಟಿ ಸೂರ್ಯ–ಶಶಿಗಳ ಕಾಂತಿಯನ್ನೇಳಿಸುವ ಪ್ರಭೆಯನ್ನು ಸೂಸಲು ; ಇಂದುಧರನು ಕೋಟ್ಯಾನುಕೋಟಿ ನಾಟ್ಯಗಳನ್ನು ಚಲ್ಲುತ್ತ, ಅಖಂಡ ಬ್ರಹ್ಮಾಂಡವೇ ಬಿರಿಯುವಂತೆ ತಾಂಡವವಾಡಿದನು.

ಹೀಗೆ, ನಟರಾಜನು ಕಾಲಾಟವಾಡುತ್ತಿರಲು ರಾಗ ತಾಳ ಲಯಗಳನ್ನನುಸರಿಸಿ ವಿಷ್ಣುವು ಮೃದಂಗವನ್ನು ಬಾರಿಸಿದನು ; ಬ್ರಹ್ಮನು ತಾಳ ಹಾಕಿದನು; ಸರಸ್ವತಿಯು ವೀಣೆಯನ್ನು ನುಡಿಸಿದಳು; ತುಂಬರ ನಾರದರೂ ತಮ್ಮ ವಾದ್ಯಗಳನ್ನು ನುಡಿಸಿದರು. ಕರಣಂಗಳು ಕಳೆಯೇರಲು, ಮೈನವಿರೇಳಲು, ಇನ್ನು ಹಿಂದಿಲ್ಲ, ಮುಂದಿಲ್ಲ ಇಂಥಹ ನಾಟ್ಯವೆಂಬಂತೆ ಶಿವನು ತಾಂಡವವಾಡಿದನು; ಶಿವನಾಡೆ ಉಮೆಯಾಡಿದಳು ; ಅಭವನಾಡೆ ನವಿಲೇರಿದ ಗುಹನಾಡಿದನು; ಗಣಾಧಿಪತಿಯಾಡೆ ಇಲಿಯೇರಿದ ಗಣಪನಾಡಿದನು; ಸರ್ವೇಶ್ವರನಾಡೆ ಹರಿಯಜಇಂದ್ರರಾಡಿದರು; ಸರ್ವಜೀವೇಶ್ವರನಾಡೆ ಮಹಾಕೋಟಿ ಜೀವರಾಶಿಗಳಾಡಿದವು.

ಹೀಗೆ, ವಿಶ್ವೇಶ್ವರನೊಡನೆ ವಿಶ್ವಕ್ಕೆ ವಿಶ್ವವೇ ನಾಟ್ಯಕ್ಕೆ ತೊಡಗಲು, ವಿಶ್ವತೋಚಕ್ಷುವೂ, ವಿಶ್ವತೋಮುಖನೂ, ವಿಶ್ವತೋ ಬಾಹುವೂ, ವಿಶ್ವತೋ ಪಾದನೂ ಆದ ಆ ಮಹಾ ಚಿದಂಬರ ಮೂರ್ತಿಯ ದಿವ್ಯರೂಪಿನ ದಿವ್ಯ ತೇಜಸ್ಸನ್ನು ನೋಡಿ ಧರಿಸಲಾಗದೆ ಚಿರತ್ತೊಂಡ ಮಾಹೇಶ್ವರನು ಆರ್ತನಾಗಿ 'ದೇವದೇವನೆ, ಸ್ವಯಂಭುವೆ, ಸಚ್ಚಿದಾನಂದ ಪರಾತ್ಪರ ವಸ್ತುವೇ, ನಿನ್ನ ಈ ಮಹಾರೂಪವನ್ನು ನಾನು ನೋಡಿ ಭರಿಸಲು ಶಕ್ತನಲ್ಲ; ದೇವಾ ಸಾಕು ಮಾಡು, ಶಾಂತನಾಗು, ಕೃಪೆದೋರು' ಎಂದು ಮೊರೆಯಿಡಲು, ಪರಮೇಶ್ವರನು ತನ್ನ ಭಕ್ತನ ಮೇಲಿನ ವಾತ್ಸಲ್ಯದಿಂದ ಆ ಮಹಾ ನಾಟ್ಯದಿಂದ ವಿರಮಿಸಿದನು. ದೇವಾಧಿದೇವತೆಗಳೂ, ಮುನಿಗಳೂ, ಮಹಾದೇವನಿಗೆ ಜಯ ಜಯವೆಂದು, ಯುಗಯುಗಾಂತರಗಳಿಗೊಮ್ಮೆ ಲಭ್ಯವಾಗುವ ಮಹಾದೇವನ ಮಹಾನಾಟ್ಯ ವನ್ನು ನೋಡುವ ಭಾಗ್ಯ, ಸಿರಿಯಾಳನಿಂದ ಲಭಿಸಿತೆಂದೂ, "ಸಿರಿಯಾಳನೇ, ಧನ್ಯಧನ್ಯ! ಸಿರಿಯಾಳನು ಗಣ ಪದವಿಗೆ ಸಂದ ದಿನ ಮಹಾದಿನ" ಎಂದು ಹೊಗಳುತ್ತಿದ್ದರು.

ಶಿವಂಭೂಯಾತ್



# ಪರಿಶಿಷ್ಟ (ಅ)

ಈ ಪುಸ್ತಕದ ರಚನೆಯಲ್ಲಿ ಕೆಳಗೆಕಂಡ ಪುಸ್ತಕಗಳಲ್ಲಿನ ಸಿರಿಯಾಳನ ಚರಿತ್ರೆಗೆ ಸಂಬಂಧಪಟ್ಟ ಭಾಗಗಳನ್ನು ನೋಡಲಾಗಿದೆ.—

| | ಗ್ರಂಥ | ಭಾಷೆ | ಕರ್ತೃ |
|---|---|---|---|
| ೧. | ಪೆರಿಯಪುರಾಣ | ತಮಿಳು | ಶೈಕ್ಕಿರಾರ್ |
| ೨. | ಹರವಿಲಾಸ | ತೆಲುಗು | ಶ್ರೀನಾಥ |
| ೩. | ವೃಷಭೇಂದ್ರ ವಿಜಯ | ಕನ್ನಡ | ಷಡಕ್ಷರದೇವ |
| ೪. | ತ್ರಿಶಷ್ಠಿ ಪುರಾತನ ವಿಲಾಸ | ,, | ಸುರಂಗಕವಿ |
| ೫. | ಬಸವಪುರಾಣ | ,, | ಭೀಮಕವಿ |
| ೬. | ಬಸವೇಶ್ವರನ ವಚನಗಳು | ,, | ಬಸವೇಶ್ವರ |
| ೭. | ಪಾಲ್ಕುರಿಕೆ ಸೋಮೇಶ್ವರಪುರಾಣ | ,, | ತೋಂಟದ ಸಿದ್ಧ ರಾರ್ಯ |
| ೮. | ಪುರಾತನ ಸಾಂಗತ್ಯ | ,, | ಪುಲಿಕೆರೆ ಸೋಮನಾಥ (ಅಂಕಿತ) |
| ೯. | ಯಕ್ಷಗಾನದ ಸಿರಿಯಾಳ ಚರಿತ್ರೆ | ತೆಲುಗು | ಕರ್ತೃ ಗೊತ್ತಿಲ್ಲ |
| ೧೦. | ಯಕ್ಷಗಾನ ವೈಶ್ರವಣಾನ್ವಯ | ,, | ,, |
| ೧೧. | ಸಿರಿಯಾಳನ ರಗಳೆ | ಕನ್ನಡ | ,, |

ಈ ಹಿಂದಿನ ಗ್ರಂಥಗಳಲ್ಲದೆ, ಆಧುನಿಕವಾದ ಈ ಕೃತಿಗಳನ್ನೂ ನೋಡಿದೆ.—

| | | | |
|---|---|---|---|
| ೧೨. | ಅರವತ್ತು ಮೂವರು ಪುರಾತನರು | ಕನ್ನಡ | ಮ. ಮ. ಮಿರ್ಜಿ |
| ೧೩. | ಪುರಾತನ ಭಕ್ತ ವಿಲಾಸ | ,, | ಎಸ್. ಸಿ. ಚನ್ನವೀರಪ್ಪ |
| ೧೪. | ಧರ್ಮಪಾಲ ಚರಿತ್ರೆ | ,, | ನಕಲಿಶ್ಯಾಮರಾಯರು |
| ೧೫. | ಸಿರಿಯಾಳ ನಾಟಕ | ,, | ಶ್ರೀ ಗುರುಸಿದ್ಧಪ್ಪ |
| ೧೬. | ಸಿರಿಯಾಳ ಸತ್ವ ಪರೀಕ್ಷೆ | ,, | ಶಾಂತ ಕವಿ. |

ಸಿರಿಯಾಳನ ಚರಿತ್ರೆಗೆ ಸಂಬಂಧಿಸದಿರುವ ಗ್ರಂಥಗಳು—

| | | | |
|---|---|---|---|
| ೧೭. | ವಿವೇಕ ಚಿಂತಾಮಣಿ | ,, | ಶ್ರೀ ನಿಜಗುಣಶಿವಯೋಗಿ |
| ೧೮. | ಕೆಲವು ಶರಣರ ರಗಳೆಗಳು | ,, | ಹರಿಹರ |

ಸಿರಿಯಾಳನ ಕಥೆಗೆ ಸಂಬಂಧಿಸಿ ನಾವು ಈ ಸಮಯಕ್ಕೆ ನೋಡಲಾಗದ ಗ್ರಂಥಗಳು.

| | | | |
|---|---|---|---|
| ೧. | ಲಿಂಗಪುರಾಣ | ಸಂಸ್ಕೃತ | |
| ೨. | ಉಪಮನ್ಯು ಭಕ್ತವಿಲಾಸ | ,, | ಉಪಮನ್ಯು ಮುನಿಗಳು |
| ೩. | ಅಗಸ್ತ್ಯ ಭಕ್ತವಿಲಾಸ | ,, | ಅಗಸ್ತ್ಯ ಋಷಿಗಳು. |
| ೪. | ಸಿರಿಯಾಳನ ರಗಳೆ | ಕನ್ನಡ | ಹರಿಹರ |

# ಪರಿಶಿಷ್ಟ (ಆ)

ಸಿರಿಯಾಳನ ಚರಿತ್ರೆಯಿರುವ ಗ್ರಂಥಗಳಲ್ಲಿ ಪರಸ್ಪರ ಕೆಲವು ವ್ಯತ್ಯಾಸಗಳಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಈ ಕೆಳಗೆ ಕೊಡಲಾಗಿದೆ.

## ಹೆಸರು

ಪೆರಿಯ ಪುರಾಣದಲ್ಲಿ ಸಿರಿಯಾಳನ ಹೆಸರು ಮೊದಲು ಪರಂಜ್ಯೋತಿ ಎಂದು ಇತ್ತು ಎಂದು ಹೇಳಿದೆ. ಆಮೇಲೆ ಇವನಿಗೆ ಚಿರುತ್ತೊಂಡ ಎಂದು ಶಿವಭಕ್ತರು ಕರೆದರೆಂದೂ, ಚಿಕ್ಕ ಭಕ್ತ ಎಂದು ಇದರ ಅರ್ಥವೆಂದೂ ಪೆರಿಯ್ಯ ಪುರಾಣದಿಂದ ತಿಳಿದುಬರುತ್ತದೆ. ಉಪಮನ್ಯು ವಿಲಾಸ ಮತ್ತು ಲೈಂಗ ಪುರಾಣಗಳಲ್ಲಿ ದಭ್ರಭಕ್ತ ಎಂದು ಇವನಿಗೆ ಹೆಸರಿತ್ತೆಂದು ತಿಳಿದುಬರುತ್ತವೆ. ಶ್ರೀ ಷಡಕ್ಷರ ದೇವನು ಶ್ರೀ ವೃಷಭೇಂದ್ರ ವಿಜಯದಲ್ಲಿ ದಭ್ರ ಭಕ್ತನ ಚರಿತ್ರೆ ಎಂದೇ ಬರೆದಿದ್ದಾನೆ. ದಭ್ರ ಭಕ್ತ ಎಂದರೂ ಚಿಕ್ಕಭಕ್ತನೆಂದೇ ಅರ್ಥವಾಗುತ್ತದೆ. ಕನ್ನಡ ಗ್ರಂಥಕಾರರೆಲ್ಲರೂ ಸಾಮಾನ್ಯವಾಗಿ ಇವನನ್ನು ಸಿರಿಯಾಳನೆಂದು ಕರೆದಿದ್ದಾರೆ. ಹೀಗೆಂದರೂ ಚಿಕ್ಕ ಭಕ್ತನೆಂದೇ ಅರ್ಥವಾಗುವುದು. ಚಿರುತ್ತೊಂಡ, ಸಿರುತ್ತೊಂಡ, ಸಿರಿಯಾಳ, ದಭ್ರಭಕ್ತ ಇವೆಲ್ಲ ಒಂದೇ ಅರ್ಥವುಳ್ಳ, ಈ ಕಥಾನಾಯಕನನ್ನೇ ಕುರಿತ ಹೆಸರಾಗಿವೆ

ಶ್ರೀನಾಥನೇ ಮೊದಲಾದ ಕೆಲವರು ಚಿರುತ್ತೊಂಡ, ಸಿರಿಯಾಳ ಇವರು ತಂದೆ ಮಕ್ಕಳೆಂದು ಬಹುಶಃ ತಪ್ಪಾಗಿ ಭಾವಿಸಿ ಬರೆದಿದ್ದಾರೆ.

ಸಿರಿಯಾಳನ ಹೆಂಡತಿಯ ಹೆಸರು ಕನ್ನಡದಲ್ಲಿ ಚಂಗಳೆ, ತೆಲುಗಿನಲ್ಲಿ ತಿರುವೆಂಗನಾಚಿ, ತಮಿಳಿನಲ್ಲಿ ತಿರುವೆಂಗಾಡು ನಂಗೈ ಎಂದೂ ಇದೆ.

ದಾಸಿಯಾದ ಚಂದನಿಕೆಯ ಹೆಸರನ್ನು ಚಂಡಿಕೆ, ಚಂಡಿ, ಚಂಡಿನಿ, ಚಂದನವತಿ ಮುಂತಾಗಿ ಹೇಳಿದ್ದಾರೆ.

## ಜಾತಿ ಮತ್ತು ವೃತ್ತಿ

ಸಿರಿಯಾಳನನ್ನು ಎಲ್ಲರೂ ಮುಕ್ತಕಂಠದಿಂದ ವೈಶ್ಯನೆಂದೂ, ಶೆಟ್ಟಿಯೆಂದೂ ಪರಮ ಶಿವಭಕ್ತನೆಂದೂ ಕರೆದಿದ್ದಾರೆ. ಪೆರಿಯ ಪುರಾಣದಲ್ಲಿ ಅವನ ಮನೆತನವು ಮಹಾ ಮಾತ್ರ ಮನೆತನವೆಂದು ಹೇಳಿದೆ. ಮಹಾ ಮಾತ್ರ ಎಂದರೆ ವೈದ್ಯರು. ಆದ್ದರಿಂದ ಅದು ವೃತ್ತಿಸೂಚಕವಾದುದೇ ಹೊರತು ಕುಲಸೂಚಕವಲ್ಲ. ಪೆರಿಯ ಪುರಾಣದಲ್ಲಿ ಅವನು ಸೇನಾನಿಯಾಗಿದ್ದನೆಂದು ಹೇಳಲಾಗಿದೆ. ಶ್ರೀನಾಥನು ಸಿರಿಯಾಳನು ಸಹಸ್ರ ಋಷಿ ಗೋತ್ರದ ವೈಶ್ಯಕುಲದವನೆಂದು ಹೇಳಿದ್ದಾನೆ. ಹರ ವಿಲಾಸವು ತಿಪ್ಪಶೆಟ್ಟಿಗೆ ಅಂಕಿತವಾಗಿದೆ. ತಿಪ್ಪಶೆಟ್ಟಿಯ ವಂಶವನ್ನು ಹೇಳುವಾಗ ಅವನು ಸಹಸ್ರ ಋಷಿಗೋತ್ರದ ವಂಶದ ವರ್ಣನೆಯನ್ನು ದೀರ್ಘವಾಗಿ ಮಾಡಿ ಸಿರಿಯಾಳನು ತಿಪ್ಪಶೆಟ್ಟಿಯ ಕುಲಕ್ಕೆ ಕೂಟಸ್ಥನೆಂದು ಹೇಳಿದ್ದಾನೆ. ಕೆಲವರು ಇವನು ವೈಶ್ಯ ವೃತ್ತಿಯಲ್ಲೇ ಹೇರಳವಾದ ಹಣವನ್ನು ಸಂಪಾದಿಸಿದನೆಂದು ಹೇಳಿದ್ದಾರೆ. ಆಧುನಿಕರಾದ ಕೆಲವರು ಸಿರಿಯಾಳನನ್ನು ರಾಜನೆಂದೂ ಭಾವಿಸಿ ಬರೆದಿದ್ದಾರೆ.

## ಕಾಲ

ಸಿರಿಯಾಳನ ತಂದೆಯಾದ ಶಿವತ್ತೊಂಡನಾಯನಾರನು ಸುಮಾರು ಕ್ರಿ. ಶ. ೬೫೦ರಲ್ಲಿದ್ದನೆಂದು ಶ್ರೀಮಾನ್ ರಾ. ನರಸಿಂಹಾಚಾರ್ಯರು (M.A.M.R.A.S.) ಅವರು ಅಭಿಪ್ರಾಯಪಟ್ಟಿರುವರೆಂದು ಶ್ರೀ ಮ. ಮ. ವಿರ್ಜಯವರು ಬರೆದಿದ್ದಾರೆ. ಸುಮಾರು 6ನೇ ಶತಮಾನ

ದಲ್ಲಿದ್ದರೆಂದು ಹೇಳಲಾಗಿರುವ ತಿರುಜ್ಞಾನ ಸಂಬಂಧಿಗಳು ಸಿರಿಯಾಳನ ಸಮಕಾಲೀನರೆಂಬುದು ಅವರು ಬರೆದಿರುವ "ತಿರು ಚಂಗಾತ್ತನ ಕುಡಿ ಪದಿಕಂ" ಎಂಬ ಪದ್ಯಮಾಲೆಯಿಂದ ತಿಳಿದುಬರುತ್ತದೆ. ಇವನು ಆರನೇ ಶತಮಾನದ ಕೊನೆಯ ಭಾಗದಲ್ಲಿದ್ದನೆಂದು ಹೇಳಬಹುದು.

## ಸ್ಥಳ

ಸಿರಿಯಾಳನು ಚೋಳಮಂಡಲದಲ್ಲಿದ್ದನೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಪೆರಿಯ ಪುರಾಣದಲ್ಲಿ, ಸಿರಿಯಾಳನು ತಿರುಚಂಗತ್ತನ ಗುಡಿಯಲ್ಲಿ ಜನ್ಮವೆತ್ತಿದನೆಂದೂ ಈ ಸಿರಿಯಾಳಪವಾಡ ನಡೆದುದೂ ಅಲ್ಲಿಯೇ ಎಂದು ಹೇಳಿದೆ. ಉಳಿದವರೆಲ್ಲರೂ ಸಿರಿಯಾಳನಿದ್ದುದ್ದು, ಈ ಪವಾಡ ನಡೆದುದು ಕಂಚಿಯಲ್ಲೆ ಎಂದು ಹೇಳಿದ್ದಾರೆ. ಕಂಚಿ ಪಲ್ಲವರ ರಾಜಧಾನಿಯಾಗಿತ್ತು. ತಿರುಚಂಗತ್ತನ ಗುಡಿಯಾದರೂ ಪಲ್ಲವರ ರಾಜ್ಯದಲ್ಲೇ ಇತ್ತು. ಆದುದರಿಂದ, ಸಿರಿಯಾಳನ ಜನ್ಮಸ್ಥಳ ತಿರುಚಂಗತ್ತನ ಗುಡಿಯೆಂದೂ, ಆಮೇಲೆ ಕಂಚಿಯಲ್ಲೇ ಬಂದು ನೆಲೆಸಿದನೆಂದೂ ನಂಬಬಹುದಾಗಿದೆ.

## ಕಥೆಯಲ್ಲಿನ ಮಾರ್ಪಾಟುಗಳು

ಸಿರಿಯಾಳನು ಹಿಂದಿನ ಜನ್ಮದಲ್ಲಿ ಪ್ರಮಥನಾಗಿದ್ದು ದೂರ್ವಾಸರ ಶಾಪದಿಂದ ಮಾನವನಾಗಿ ಹುಟ್ಟಿದನೆಂದೂ, ಕುಮಾರಸ್ವಾಮಿಯು ಅವನ ಮಗನಾಗಿ ಅವತರಿಸಿದನೆಂದೂ ಶ್ರೀನಾಥನು ಸೂಚಿಸಿದ್ದಾನೆ. ಇತರರು ಈ ಜನ್ಮವೃತ್ತಾಂತಗಳನ್ನು ಹೇಳದೇ ಇದ್ದರೂ, ಚೀಲಾಳನು ವರಪ್ರಸಾದದಿಂದ ಹುಟ್ಟಿದನೆಂದು ಕೆಲವರು ತಿಳಿಸಿದ್ದಾರೆ. ಸಿರಿಯಾಳನನ್ನು ಪರೀಕ್ಷಿಸಲು ಶಿವನು ನಿಜಗಣವನ್ನು ಕಳಿಸಿದ್ದನೆಂದು ಕೆಲವರೂ, ದೇವತೆಗಳನ್ನು ಕಳಿಸಿದ್ದನೆಂದು ಮತ್ತೆ ಕೆಲವರೂ ತಿಳಿಸಿದ್ದಾರೆ. ಸಿರಿಯಾಳನನ್ನು ಪರೀಕ್ಷಿಸಲು ಶಿವನು ಬಂದಾಗ, ಜಂಗಮ ರೂಪದಲ್ಲಿ ಬಂದನೆಂದೂ ಕಾಪಾಲಿಯಾಗಿ ಬಂದನೆಂದೂ ಭೈರವನಾಗಿ ಬಂದದೆಂದೂ, ಶಿವಯೋಗಿಯಾಗಿ ಬಂದನೆಂದೂ ಹೇಳಿದ್ದಾರೆ. ಮಳೆ ಬಂದ ವಿಚಾರವನ್ನು ಸಾಮಾನ್ಯವಾಗಿ ಎಲ್ಲ ಕವಿಗಳೂ ಬರೆದಿದ್ದಾರೆ. ಶ್ರೀನಾಥನಂತೆ ಈಶ್ವರನೇ ಮಳೆ ಕರೆಯಬೇಕೆಂದು ಇಂದ್ರನಿಗೆ ಆಜ್ಞಾಪಿಸುತ್ತಾನೆ. ಆದರೆ ಮಿಕ್ಕ ಕವಿಗಳು, ಶಿವನ ಆಜ್ಞೆಯಂತೆ ಸಿರಿಯಾಳನನ್ನು

ಪರೀಕ್ಷಿಸಲು ಬಂದಿದ್ದ ದೇವತೆಗಳೇ ಮಳೆಗರೆದರೆಂದು ಬಂದಿದ್ದಾರೆ. ಸಾಮಾನ್ಯವಾಗಿ ಎಲ್ಲ ಕನ್ನಡ ಗ್ರಂಥಕಾರರೂ ಸಿರಿಯಾಳನನ್ನು ಪರೀಕ್ಷಿಸಲು ಶಿವನೊಬ್ಬನೇ ಬಂದನೆಂದು ಹೇಳುತ್ತಾರೆ. ಶ್ರೀನಾಥನಂತೆ ಶಿವನು ಪಾರ್ವತಿಯನ್ನೂ ಕರೆದುಕೊಂಡು ಬರುತ್ತಾನೆ. ಅಲ್ಲದೆ, ಕೈಲಾಸದಲ್ಲಿದ್ದ ಶಿವನು ಬಿವರಿದ ಸಂಧರ್ಭವನ್ನೂ ಹಾಗೆ ಬೆವರಲು ಕಾರಣವಾದ ಕಬ್ಬಿನ ಹಾಲಿನ ಕಥೆಯನ್ನೂ ಶ್ರೀನಾಥನ ಹೊರತು ಮಿಕ್ಕವರು ಹೇಳಿರುವುದು ಕಂಡು ಬರುವುದಿಲ್ಲ. ಸಿರಿಯಾಳನು ಜಂಗಮರನ್ನು ಹುಡುಕಿಕೊಂಡು ಹೋದಾಗ, ಶಿವನು ಅವನ ಮನೆಗೆ ಜಂಗಮನಾಗಿ ಬಂದು ಹೋಗುತ್ತಾನೆಂದು ಕೆಲವರೂ, ಅವನು ಮರದ ಬುಡದಲ್ಲಿದ್ದನೆಂದು ಕೆಲವರೂ, ಹಾಳು ಗುಡಿಯಲ್ಲಿದ್ದನೆಂದು ಶ್ರೀನಾಥನೂ ತಿಳಿಸಿರುತ್ತಾರೆ. ಮರಿಯನ್ನು ಗಿಡುಗನು ಹಿಡಿಯಲು ಗಿಳಿಗಳು ಪಟ್ಟ ಸಂಕಟವನ್ನು ಕಂಡಮೇಲೆ ಸಿರಿಯಾಳನ ಮಗನನ್ನು ಕುಯ್ದಿಡಲು ಕೇಳಬೇಕೆಂದು ಶಿವನು ಮನಮಾಡಿದುದಾಗಿ ಕೆಲವರು ಬರೆದಿದ್ದಾರೆ. ಚೀಲಾಳನನ್ನು ಮಠದಿಂದ ಸಿರಿಯಾಳನೇ ಕರೆತಂದನೆಂದು, ಸುರಂಗ ಕವಿಯೊಬ್ಬನ ಹೊರತಾಗಿ, ಮಿಕ್ಕೆಲ್ಲರೂ ಹೇಳಿದ್ದಾರೆ. ಸುರಂಗ ಕವಿಯಂತೆ, ಚಂಗಳೆಯೇ ಮಠಕ್ಕೆ ಹೋಗಿ ಮಗನನ್ನು ಕರೆತರುತ್ತಾಳೆ. ಮಗನನ್ನು ಕತ್ತರಿಸಿ ಪಾಕ ಮಾಡಿದ ಮೇಲೆ ಜಂಗಮರನ್ನು ಸಿರಿಯಾಳನು ಮನೆಗೆ ಕರೆತರುತ್ತಾನೆಂದು ಸಾಮಾನ್ಯವಾಗಿ ಎಲ್ಲರೂ ಹೇಳಿದ್ದಾರೆ. ಆದರೆ ಶ್ರೀನಾಥನು ಅತಿಥಿಗಳು ಬಂದಮೇಲೆಯೇ ಚೀಲಾಳನನ್ನು ಕುಯ್ದು ಪಾಕ ಮಾಡಿದರೆಂದು ತಿಳಿಸಿದ್ದಾನೆ. ಕೆಲವರು ಚೀಲಾಳನ ವಯಸ್ಸು ಐದುವರ್ಷವೆಂದೂ, ಕೆಲವರು ಏಳುವರ್ಷವೆಂದೂ ಹೇಳಿದ್ದಾರೆ. ಚೀಲಾಳನನ್ನು ಛೇದಿಸುವಾಗ ದಾಸಿಯಾದ ಚಂದನಿಕೆಯೂ ಅಲ್ಲಿರಲಿಲ್ಲವೆಂದು ಕೆಲವರು, ಅವಳೂ ಮಗುವನ್ನು ಆಗ ಹಿಡಿದುಕೊಂಡಿದ್ದಳೆಂದು ಕೆಲವರೂ, ಹೇಳಿದ್ದಾರೆ. ಚಂದನಿಕೆ ದಾಸಿಯಷ್ಟೇ ಅಲ್ಲದೆ ಚಂಗಳೆಯ ತಂಗಿಯೆಂದೂ, ಒಂದಕಡೆ ಹೇಳಿದೆ. ಸಿರಿಯಾಳನೊಡನೆ ಕೈಲಾಸಕ್ಕೆ, ಕಂಚಿಯ ಏಳು ಕೇರಿಯನ್ನು ಒಯ್ದನೆಂದು ಹಲವರೂ, ಹದಿನಾಲ್ಕು ಕೇರಿಗಳನ್ನು ಒಯ್ದನೆಂದು ಕೆಲವರೂ ಕಂಚಿಯ ಊರನ್ನೇ ಒಯ್ದನೆಂದು ಒಬ್ಬರೂ ತಿಳಿಸಿದ್ದಾರೆ. ಸಿರಿಯಾಳನು ಕೊನೆಗೆ ಮಾಹೇಶ್ವರನಾದಂತೆ ಕೆಲವರು ಬರೆದಿದ್ದಾರೆ.

# ಪರಿಶಿಷ್ಟ (ಇ)

---

[ ಶ್ರೀ ಸಿರಿಯಾಳನನ್ನು ಕುರಿತು ತಮಿಳು ತೆಲುಗು ಕನ್ನಡಗಳಲ್ಲಿ ಕವಿಗಳು ಮಾಡಿರುವ ಕೆಲವು ಪ್ರಶಂಸಾಭಾಗಗಳನ್ನೂ, ನಿಜಗುಣಶಿವಯೋಗಿಗಳಿಂದ ರಚಿತವಾಗಿರುವ "ಅರುವತ್ತುಮೂವರು ಪುರಾತನರ ರಗಳೆ" ಯನ್ನು ಪೂರ್ತಿಯಾಗಿಯೂ ಈ ಪರಿಶಿಷ್ಟದಲ್ಲಿ ಉದ್ಧರಿಸಲಾಗಿದೆ]

---

**ತಿರುಜ್ಞಾನಸಂಬಂಧಿಗಳು ಸು. 600** திருஞானசம்பந்தர்

பைங்கோட்டு மலர்ப்புன்னைப் பறவைகாள் பயப்பூரச்
சங்காட்டந் தவிர்த்தென்னைத் தவிரா நோய் தந்தானே
செங் காட்டங் குடிமேய சிறுத்தொண்டன் பணிசெய்ய
வெங்காட்டுளனலேந்தி விளையாடும் பெருமானே.

பொன்னம் பூங்கழிக்கானற் புணர்துணையோடுடன்வாழு
மன்னங் காளன்றில் காளகன்றும் போய் வருவீர்காள்
கன்னவிறோட் சிறுத்தொண்டன் கணபதீச் சரமேய
இன்னமுதினிணையடிக் கீழெனை நல்லதுரையீரே.

குட்டத்தாங் குழிக்கரையுங் குளிர் பொய்கைத்தடத்
தகத்து
மிட்டத்தாயிரை தேருமிருஞ் சிறகின் மடநாராய்
சிட்டன் சீர்ச் சிறுத்தொண்டன் செங்காட்டங்குடிமேய
வட்டவார் சடையார்க்கென் வருத்தஞ்
சென்றுரையாயே

கானருகும் வயலருகுங் கழியருகுங் கடலருகு
மீனிரிய வருபுனலினிரை தேர் வெண்மட நாராய்
தேனமர்தார் சிறுத்தொண்டன் செங்காட்டங்
குடிமேய
வாமைருஞ் சடையார்சென் வருத்தஞ்
சென்றுரையாயே.

ஆரலாஞ் சுறவேமேய்ந்த கன்கழனிச் சிறகுலர்த்தும்
பாரல் வாய்ச் சிறுகுருகே பயிறாவி மடநாராய்
சீருலாஞ் சிறுத்தொண்டன் செங்காட்டங் குடிமேய
நீருலாஞ் சடையார்க் கென் நிலைமை சென்றுரையீரே.

குறைக்கொண்டாரிடர் தீர்த்தல் கடனன்றே குளிர்
பொய்கைத்
துறைக் கெண்டை கவர்குருமக துணை பிரியா
மடநாராய்
கறைக்கண்டன் பிறைச் சென்னிக் கணபதிச் சரமேய
சிறுத்தொண்டன் பெருமான் சீரரு ளொருநாட்
பெறலாமே.

சருவடிய படசங்கால் வெண்குருகு பொன்கழிநாரா
யொருவடியாளிரந்தாளென் றொருநாட்
சென்றுரையீரே
செருவடிதோட் சிறுத்தொண்டன் செங்காட்டங்
குடிமேய
திருவடிதன் திருவருளே பெறலாமோ திறந்தவர்க்கே.

கூராரலிரை தேர்ந்து குளமுலவி வயல் வாழுந்
தாராவே மடநாராய் தமியேற் கொன்றுரையீரே

சீராளன் சிறுத்தொண்டன் செங்காட்டங் குடிமேய
போராளன் பெருமான்றனருளொரு நாட் பெறலாமே.

நறப்பொலி பூங்கழிச்சாலையில் குருகேயுல செல்லா
மறப்பலி தேர்க்குழல் வார்க்கென்னவர் கோடலழகியே
சிறப்புலவன் சிறுத்தொண்டன் செங்காட்டங் குடிமேய
பிறப்பிலிபேர் பிதற்றி நின் பிழைக்கொவெம் பெருகலமே.

செந்தண் பூம்புனல் பரந்த செங்காட்டங் குடிமேய
வெந்த நீறணி மார்பன் சிறுத்தொண்டனவன் வேண்ட
வந்தவன் குங்கலிக்காழியடிகளையே யடிபரவுஞ்
சந்தங்கொள் சம்பந்தன் தமிழுரைப்போர் தக்கோரே.

—திருச்சங்காட்டங்குடிப் பதிகம்
—ತಿರುಚೆಂಗಾತ್ತನ ಕುಡಿಪದಿಕಂ

ತಿರುಜ್ಞಾನ ಸಂಬಂಧಿಗಳು ತಮ್ಮ ತೀರ್ಥಯಾತ್ರೆಯಲ್ಲಿ ದಿವ್ಯಕ್ಷೇತ್ರಗಳನ್ನು ಸಂಪರ್ಶಿಸುತ್ತಾ ತಿರು ಚೇಂಗಾತ್ತನಗುಡಿಯ ಬಳಿಗೆ ಬಂದಾಗ ಚಿರುತೊಂಡರು ಎದುರ್ಗೊಂಡು ತಮ್ಮ ಮನೆಗೆ ದಯಮಾಡಿಸಬೇಕೆಂದು ಕರೆದುಕೊಂಡು ಹೋಗಿ ಆದರಾತಿಥ್ಯಗಳಿಂದ ಸತ್ಕರಿಸಿದರು. ಬಳಿಕ ತಿರುಜ್ಞಾನ ಸಂಬಂಧಿಗಳು ಅಲ್ಲಿನ ಗಣಪತೀಶ್ವರ ಗುಡಿಗೆ ಬಂದು ಪ್ರದಕ್ಷಿಣೆ ಮಾಡಿ ಆ ಗುಡಿಯನ್ನೂ, ಅದನ್ನೊಳಗೊಂಡ ಕ್ಷೇತ್ರವನ್ನೂ ಕುರಿತು ಮೇಲೆ ಹೇಳಿದ ಸ್ತೋತ್ರವನ್ನು ರಚಿಸಿದರು. ತಿರುಚೆಂಗಾತ್ತನ ಗುಡಿ ಕ್ಷೇತ್ರದ ಮಹಿಮೆಯು ತನಗೆ ಆದರಾತಿಥ್ಯವನ್ನು ಮಾಡಿದ ಶ್ರೀ ಚಿರುತೊಂಡರ ಇರುವಿಕೆಯಿಂದ ಅಧಿಕವಾಯಿತೆಂದು ಹೇಳಿದ್ದಾರೆ. ಎಲ್ಲಾ ಪದ್ಯಗಳಲ್ಲಿಯೂ ಚಿರುತೊಂಡರ ಹೆಸರು ಪ್ರಕಾಶಿಸುತ್ತಿದೆ.

**ಸುಂದರಮೂರ್ತಿ ನಾಯನಾರ್ ಸು. 930**

சுந்தரமூர்த்தி நாயனார்.

"செங்காட்டங் குடியேய சிறுத்தொண்டர்க் கடியேன்"
—திருத்தொண்டத்தொகை

"ತಿರುಚೆಂಗಾಟ್ಟನ ಗುಡಿಯಲ್ಲಿರುವ ಚಿರುತೊಂಡರಿಗೆ ದಾಸನಾನು."
—ತಿರುತೊಂಡತೊಗೈ

**ಪಟ್ಟಿಣತ್ತಾರ್ ಸು. 1100** பட்டினத்தார்.

வாளால் மகவரிந் தூட்டவல்லேனல்லன்
மாதுசொன்ன
சூளாலிளமை துறக்க வல்லேனல்லன் தொண்டுசெய்து
நாளாறில் கண்ணிடந்தப்ப வல்லேனல்லனினிச்சென்
றாளாவதெப்படியோ திருக்காளத்தியப் பருக்கே.

ಕಾಳಹಸ್ತಿಯ ಈಶ್ವರನೆದುರಿನಲ್ಲಿ ಸ್ತೋತ್ರಮಾಡುತ್ತಾ ಹೇಳುತ್ತಾರೆ. "ಮಗುವನ್ನು ಕಡಿದು ಶಿವನಿಗುಣಲಿಟ್ಟ ಚಿರುತ್ತೊಂಡರು, ಕಣ್ಣನ್ನು ಕಿತ್ತು ಶಿವನಿಗೆ ಕೊಟ್ಟ ಕಣ್ಣಪ್ಪರು, ಶಿವನಿಗಾಗಿ ಇಹಲೋಕ ಸೌಖ್ಯಗಳನ್ನು ತ್ಯಜಿಸಿದ ತಿರುನೀಲಕಂಠರು, ಇವರಂತೆ ನಾನು ತ್ಯಾಗಮಾಡಲಾರೆ ಮಹಾದೇವ".

**ನಂಬಿಯಾಂಡಾರ್ ನಂಬಿ ಸು. 1100** நம்பியாண்டார் நம்பி

புலியின் அதளுடைப் புண்ணியற்கின் னமுதாகத்
தனதோர்
ஒலியின் சதங்கைக் குதலைப் புதல்வன் உடல்துணித்துக்
கலியின் வலிகெடுத்தோங்கும் புகழ்ச்
சிறுத்தொண்டன் கண்டீர்

மணியும் பொழிலொன் செங்காட்டங் குடியவர்
பன்னவனே.

—திருவந்தாதி

ಪುಲಿಚರ್ಮಧಾರಿಗೆ ಕಿರುಗೆಜ್ಜೆಯಿಂದ ಶೋಭಿಸುವ ಕೂಸನ್ನು ಕಡಿದು ಸ್ವೀಕರಿಸಲು ಕೊಟ್ಟು ಚಿರುತೊಂಡರ ತ್ಯಾಗವೇ ದೊಡ್ಡದು; ತಿರು ಚೆಂಗಟ್ಟನಗುಡಿಯಿಂದ ಬಂದ ಈ ಭಕ್ತ ಚಕ್ರವರ್ತಿಯ ಹೆಸರು ಕಲಿಕಾಲ ವಲ್ಲಿಯೂ ಚಿರಾಯುವಾಗಲಿ.

—ತಿರುವೆಂದಾದಿ

ಶೇಕ್ಕಿಳಾರ್ ಸು. 1100—1200 சேக்கிழார்

அருள்பொழியுந் திருமுகத்தில் அணிமுறுவல்
நிலவெறிப்ப
மருள் பொழியும் மலஞ்சிதைக்கும் வடிச்சூலம்
வெயிலெறிப்பப்
பொருள் பொழியும் பெருங்கருணை தழைத்தோங்கிப்
புவி எத்த
தெருள் பொழிவண் தமிழ் நாட்டுச் செங்காட்டங்
குடிச்சேர்ந்தார்

'பொருவில் பெருமைப் புத்திரன் மெய்த்தன்மை
அளித்தான் எனப்பொலிந்து
மருவு மகிழ்ச்சி எய்த அவர் மனைவியாரும்
"கணவனார்
அருமை உயிரை எனக்களித்தான்" என்று
மிகவும் அகமலர
இருவர் மனமும் பெருவகை எய்தி அரியவினை
செய்தார்.

பரமர் அருளால் பள்ளியினின் றோடி வருவான்
போல்வந்த

தாயின் வளர்ப்பின் தனிப்புதல்வன் தன்னை
எடுத்தார் தழுவித்தம்
காழ்முன் அணைந்தார் கணவனார் கையிற்
கொடுப்பக்களி கூர்ந்தார்.

—பெரிய புராணம்

ಕರುಣಾಸಮುದ್ರನಾದ ಪರಶಿವನು ತ್ರಿಶೂಲಧರನಾಗಿ ತಿರುಚೆಂಗತ್ತನ ಗುಡಿಗೆ ಬಂದು ಚಿರುತೊಂಡರ ಸತ್ವಪರೀಕ್ಷೆಯಿಂದ ಅವನ ಮಹಿಮೆ ಲೋಕಕ್ಕೆ ಪ್ರದರ್ಶಿತವಾಗುವಂತೆ ಮಾಡಿ ಹಿಂದಿರುಗಿದನು.

ಸುತನು ತಮ್ಮ ಸಾಯುಜ್ಯಕ್ಕೆ ಕಾರಣನಾದನೆಂದು ತಂದೆ ತಾಯಿಗಳು ಬಲುಹಿಗ್ಗಿದರು ತಮಗೆ ತಕ್ಕ ಮಗನಾಗಿ ಮಿಗಿಲಾದ ತ್ಯಾಗಕ್ಕೆ ಸಿದ್ಧನಾದ ಸತ್ಪುತ್ರನನ್ನು ಕಂಡು ಚಿರುತೊಂಡರ ಶಿವಭಕ್ತಿಯು ಹೆಚ್ಚಳವಾಯಿತು.

ಶಾಲೆಯಿಂದ ಬಂದಂತೆ ಓಡಿಬಂದ ಮಗನನ್ನು ಕಂಡು ತಾಯಿಯ ಹೃದಯವು ಉಲ್ಲಾಸಗೊಳ್ಳಲು ಆಕೆ ಮಗುವನ್ನು ಆದರಿಸಿ ತನ್ನ ನಾಯಕನ ಕೈಗಿತ್ತಳು. ಎಲ್ಲರೂ ಶಿವನ ಆಧಿಕ್ಯ ಸೂಚಕವಾದ ಸ್ತೋತ್ರಗಳನ್ನು ಪಠಿಸಿದರು.

—ಪೆರಿಯ ಪುರಾಣಂ

ಪರಂಜ್ಯೋತಿಮುನಿವರರು ಸು. 1600    பரஞ்சோதி முனிவர்

அன்று சிறுத்தொண்டரிடும் பிள்ளைக்கறியமுது
மென்று சுவைதெரிந்தவேடனிட்ட ஊனும்போ
லின்று நரைப்பாட்டி விடுபிட்டு நயந்தருந்தி
யென்று மடியார்க் கெளிவந்தா யெந்தாயே.

—திருவிளையாடற் புராணம்.

“ಅಂದು ಚಿರುತೊಂಡನ ಮನೆಯಲ್ಲಿ ಅವನ ಮಗನನ್ನು ಕಡಿಸಿ ಊಟಮಾಡಿದೆ. ಸ್ತೋತ್ರವನ್ನು ಮಾತ್ರ ಮಾಡಬಲ್ಲ ನನ್ನಿಂದ ಅಂತಹ ತ್ಯಾಗವು ಸಾಧ್ಯವಿಲ್ಲ.

—ತಿರುವಲ್ಲಿಯೊಂಡ ಪುರಾಣ

శ్రీనాథ కవి సు. 1300-1400 శ్రీనాథకవి

మూయ్యేడు వాసరంబుల కాలవర్షంబు, జడివట్టి కురియఁ
బర్జన్యుఁ బనిచి
శివుఁడు తానొక్క వృద్ధశివయోగి గ్రుడ్డి, యవ్వైనతన
జలజాక్షితోడఁ
గడుపేదఱికం జనుదెంచి కొడుకు గూఁపసనుతోడి, భోజనంబునకు
విభూతి యొసంగి
పుత్రుం బాకముం జేసి బోనముపెట్టినఁ గుడువంగ నొల్లక
పెడమోము వెట్టి.
సిరమాహేశ్వరాచార్యదీక్షయందు, నిజముగా నిల్చె నెవ్వాని
నియతిపరుఁడు
వాఁడు పాత్రుండు కాఁడె కైవారమునకు, దురితదూరుండు
శ్రీ చిరుతొండనంబి,

ఆ కాంచీనగరంబునందు శివభక్త్యాచార సామ్రాజ్యల
క్ష్మీశ్రీకంఠాభరణంబు నిర్మలయశశ్చంద్రికాస్నాన యాంభోధికి
రాకాపూర్ణ విధుండు చిరుతొండ శ్రేష్ఠుఁడయ్యుత్తము
డేకాలంబును బాయకుండు గిరిపుత్రీశాన పూజావిధుల్.

* * * * * శివభక్త్యాచార సంపత్తికిన్
సీమాభూమి యనం బ్రసిద్ధుఁడగు నా చిరుతొండనంబీశ్వరుండు.

చిరుతొండండను పేర వైశ్యకుల మాంజిష్ఠ్యంబునం బొంగంగా
గరకంఠుం దరుణేందుశేఖరుని పటాంగలంబు పూజించు నెం
దరుభక్తుల్దనువేఁడిన న్బ్రమదమున్ స్వాత్వ్యమున్ శక్తియు
న్నెరవుం గల్గి తదీప్సితార్థములు గావించున్నిరాలస్యతన్.

ಶ್ರೀ ನಿಜಗುಣ ಶಿವಯೋಗಿ ವಿರಚಿತ

# ಅರವತ್ತುಮೂರು ಮಂದಿ ಪುರಾತನರ ತ್ರಿವಿಧಿ



ಶ್ರೀಗುರುವೆ ನಿಜಸುಖದ । ಸಾಗರವೆ ಶಿರಮಸಗು
ತಾಗಳುಂ ಬೆಳಗುತಿಹ ನಿನ್ನ ಕಡೆಗಣ್ಣ
ಳೀಗೆ ಸಂತಸವನಖಿಳರ್ಗೆ ॥ ೧ ॥

ಶರಣಜನ ಸಹಿತಂಗೆ । ಕರುಣರಸಭರಿತಂಗೆ
ದುರಿತದೂರಂಗೆ ಗಿರಿಸುತೆಯ ರಮಣಂಗೆ
ಗುರುಶಂಭುವಿಂಗೆ ನತನಪ್ಪೆ ॥ ೨ ॥

ಇಂಗಡಲೊಳಿಂಪು ಬೆಳ । ದಿಂಗಳೊಳು ತಂಪು ಕುಸು
ಮಂಗಳೊಳು ಕಂಪು ಬೆರೆದಂತೆ ಪರಮನೊಳು
ಪಿಂಗದಗಸುತೆಗೆ ನತನಪ್ಪೆ ॥ ೩ ॥

ಮಿಸುನಿತೊಡವೆನಿಸಿ ಬಹು । ಪೆಸರು ದಳೆದಂತೆ ಭಾ
ವಿಸೆ ನೋಡಲಭವನಖಿಳರೆಂದೆನಿಪ ಗಣ
ವಿಸರವೆಲ್ಲಕ್ಕೆ ನತನಪ್ಪೆ ॥ ೪ ॥

ಉತ್ತಮ ಗಣೇಶ್ವರರ । ವೊತ್ತದೊಳು ನಿಜಕೀರ್ತಿ
ವೆತ್ತ ಮಹಿಮೆಗಳನೊಳಕೊಂಡ ಶರಣರರು
ವತ್ತುಮುವ್ವರನೆ ಪೊಗಳುವೆನು ॥ ೫ ॥

ಶರಣರಂ ಪಾರ್ವತೀ । ಶ್ವರರಿಗಿಂದಧಿಕವೆಂ
ದೊರೆವಾಗಮವನು ತಿಳಿದು ನಾನವರ ಪದ
ಸರಸಿಜಂಗಳನೆನುತಿಗೈವೆ ॥ ೬ ॥

ಕೃತಿಯೊಳೀಶಾರ್ಚನೆಗೆ । ನುತಿಕೋಟಿ ಮಿಗಿಲೆಂದು
ಕತಿಕರಿಸಿ ಪೊಗಳುತಿಹುದಾಗಿ ಶರಣ ಸಂ
ತತಿಯನೀ ಕಾಡಿ ಹರಸುವೆನು ॥ ೭ ॥

ಹರಗಣೆಯ ಕಳವಳದೊ | ಳಿರು ತಲಳಿದೋರ್ವಂಗೆ
ಪರಲೋಕವಾದುದರಿಂದೆ ನುತಿಸೆ ನೀ
ಶ್ವರಗಣಕುಲವನೊಲಿದಿಂತು ॥ ೮ ॥

ಮುದವಲರೆ ಪೊನ್ನಾಂಬ | ಲದೊಳು ಸಂಸಾರ ಧ
ರ್ಮದಲಿರುಗೆದೋರುತಿಹರೆಲ್ಲನೇಣಾಂಧ
ನಾದರದಿಂದಲೀಗೆನಗತುಳಮತಿಯನು ॥ ೯ ॥

ಶಿವನಾಣೆಯಿಡೆ ತನ್ನ | ಯುವತಿಯನು ತೊರೆದು ಶಂ
ಭುವಿನ ಕೃಪೆವಡೆದ ತಿರುನೀಲಕಂಠರ್ಗೆ
ಸವೆಯದೊಲವಿಂದೆ ಶರಣೆಂಬೆ ॥ ೧೦ ॥

ಮಡದಿಯನುಮೇಶಂಗೆ | ಕೊಡಲೊಯ್ಯುತಿರೆ ಕಂಡು
ತಡೆಯೆಬಂದ ನರನಿರಿದಿಹ ಪಗೆಯಾಂತ
ರಡಿಗಳೆನಗೀಗೆ ಜಯವನು ॥ ೧೧ ॥

ಬಲುಬರಂದೋರಲದ | ರೊಳು ಭಕ್ತರರ್ಥಮಂ
ನಲಿದುಂಡು ಬಂಧುಗಳನಿಕ್ಕಿ ಮಿಕ್ಕನೊರ್ಗೀ
ಳ್ಪಲಿಯಾಂಡರೆನ್ನ ಪೊರೆವುದು ॥ ೧೨ ॥

ಪಿತನೊಮ್ಮೆ ಪಾರ್ವತಿಯ | ಪತಿಯಂ ನಿರಾಕರಿಸೆ
ಶೃತಿವಿಧಿಗಳು ಕದವ ನಿರಿದಿಡಿದ ಚಂಡೇಶ
ನತಿಭಕ್ತಿಸೌಖ್ಯವೆನಗಕ್ಕುಂ ॥ ೧೩ ॥

ವರಕುಮಾರನ ಶಿರವ | ನರಿದಟ್ಟು ಸವಿಮಾಡಿ
ಹರನಿಗುಣಲಿಟ್ಟ ಚಿರುತೊಂಡರಣುಗನಾ
ಗಿರುತಿರ್ಪೆ ನಚ್ಚುಸುಖಿಯಾಗಿ ॥ ೧೪ ॥

ಗಿರಿಶನರ್ಚನೆಗೆ ತರು | ವಲರ ನೀಡಾಡೆ ಮದ
ಕರಿಯನಪ್ಪಳಿಸಿರಿದ ಭಕ್ತರೆನ್ನನು
ಪ್ಪರಿಸಲಿ ಭವನೊಲವಿಂದೆ ॥ ೧೫ ॥

ಫಣಿಧರನ ಬಲಿಯಲರ । ನೆಣಿಸದರಸಿನ ರಾಣಿ
ಮಣಿದೆತ್ತಿ ವಾಸಿಸಲು ಪುಂಗನರಿದ ಚೀರು
ತೊಣೆಯಾಂಡರಡಿವಿಡಿದು ಬಾಳ್ವೆ ॥ ೧೬ ॥

ಮಲಹರನ ಸಿರಿಮುಡಿಗೆ । ಸಲುವಲರಡೆಗೆದ ನಿಜ
ಲಲನೆಯ ಸುಪಾಣಿಯನು ತುಂಡಿಸಿದ ಮಹಾ
ಕುಳಚಂಗರೆನ್ನ ಕರುಣಿಪುದು ॥ ೧೭ ॥

ಚರವೇಷಮಂ ತಳೆದ । ಚರನ ಚರಣವ ತೊಳೆಯ
ದಿರೆ ತನ್ನ ಸತಿಯ ಕರವರಿದಾಕಲಿಕಂಬ
ನಿರಿಸಲೆನ್ನವನೆ ಸುಖದಲ್ಲಿ ॥ ೧೮ ॥

ಧರೆ ನೋಡೆ ಹಸನಿಂದ । ವರಸುತೆಯ ಮುಡಿಯನು
ತ್ತರಿಸಿ ಭವನಂಭ್ರಿಗೊಲಿದಿತ್ತ ಮಾರಕಂ
ಚರನೊಪ್ಪಿ ಸಲಹುತಿರಲೆನ್ನ ॥ ೧೯ ॥

ಮೃಡನ ದೃಷ್ಟಿಯೊಳು ರುಜೆ । ಯಡರಿತೆಂದತಿಭೀತಿ
ವಿಡಿದು ನಿಜ ಲೋಚನವನಿತ್ತ ಕಣ್ಣಪ್ಪ
ನಡಿಗಳಂ ಪೊತ್ತು ಬಿಡದಿರ್ಪೆ ॥ ೨೦ ॥

ಜಡೆದಲೆಗೆ ತನ್ನ ಶಿರ । ಮುಡಿದಲೆಯನಿತ್ತು ಶಿವ
ನಡಿಗೆ ಸವೆಸಂದ ಕಲಿ ಪುಗಲ್ಚೋಳ ನೀ
ನೆಡೆಗೊಂಡಿರೆನ್ನ ಮನದಲ್ಲಿ ॥ ೨೧ ॥

ಶಶಿಭೂಷಣಂಗೆ ನೇ । ಮಿಸಿದಕೆ ಸೂಸೆ ತ
ನ್ನಸುವನಿತ್ತೊಲಿಸಿದರಿವಾಳ್ತಾಂಡನೀ ಮ
ನ್ನಿಸು ಸಲೆ ಸೈಪುದಳಿವೆನು ॥ ೨೨ ॥

ಖಂಡಪರಶುವಿನ ಕರಿ । ಗೊಂಡ ಕಂತೆಯನುಪಮೆ
ಗಂಡು ನಿಜರುಧಿರದೊಳು ತೊಳೆದ ತಿರುಕುರುಪೆ
ತೊಂಡರೆನಗಮಳತೆಯ ನೀಗ ॥ ೨೩ ॥

ಧುರದ ಭಟನೊಳು ಭಸಿತ । ನಿರೆ ಕಂಡು ತನ್ನೊಡಲ
ನಿರಿದಿತ್ತು ನಿಷ್ಠುರೆನಿಸಿದನಾದಿನಾಥಂ
ಚರನಾಗಿ ಬದುಕುವೆನು || ೩೪ ||

ಸುಳಿದು ಚರವೇಷಮಂ । ತಳೆದು ಬಂದಿರೆ ಖಳ
ನೊಲು ಕಾದೊಲವಾಂತಜಿಲಿ ಚೇದಿರಾಜನೆ
ನ್ನೊಳು ಶಾಂತಿಸುಖವ ನೆರೆಮಾಳ್ಕೆ || ೩೫ ||

ಶಿವನಿಂದೆಗೈವ ಬಹು । ಶ್ರವಣರಂಡಿಗೆವ ಶೂ
ಲವನರಿದುಮೊದವೆ ಸಸೆದಿಹ ಕುಲಶ್ವರ್ಯ
ನವಿರತಂ ಬುದ್ಧಿಗೊಡುವದು || ೩೬ ||

ಅಗೆವಕೊಳನಂ ಜರಿದು | ನಗುವ ಜಿನಸಮಯಗಳ
ನಗೆಯಲೋಸುಗವೆ ನಯನಂ ಬಿಡಿದ ನಾಟ್ಯ
ಮಿಗೆತಾಂಡಿ ಮುದವನೊದವಿಸು || ೩೭ ||

ಅಸಮಾಕ್ಷನಿಂದಕರ । ರಸನೆಗಳನುಗಿದು ಸಂ
ಶಸವನೊಳಕೊಂಡ ಕವಿ ಚಿಟ್ಟೆಯಾಂಡರ್ನೀ
ನಸುಗಾಯೊ ಭುವನಜನವರ್ಯ || ೩೮ ||

ಕಲುಷರೂಪಿನ ಜೈನ । ಕುಲಪಂಕವಂ ದಾಂಟಿ
ಮಲಹರನ ಚರಣವಿಡಿದ ವಾಗೀಶನೀ
ನೆಲಸು ವದನಾಂಬುಜದೊಳೆನ್ನ || ೩೯ ||

ಬೆಂಬಿಡದೆ ಬತ್ತಲೆಗಾ । ರಂ ಬಡಿದು ಭಸಿತವ ನೊ
ಡಂಬಡಲು ಧರೆಯೊಳೆಸಗಿದ ತಿರುಜ್ಞಾನ ಸಂ
ಬಂಧಿ ನಿಜವನರುಪೆನಗೆ || ೪೦ ||

ಎಸೆವಿಳೆಯಚನ್ನೈನಾರ । ದೆಸೆಯಿಂದೆ ದೀಕ್ಷೆಗೊಂ
ಡಸಮಲಿಂಗದೊಳು ಬೆರದು ಮಂಗಾಯಕ್ಕ
ರಸಿಯರ್ಗೆ ತನುಜನೆನಿಸುವೆನು || ೪೧ ||

ಜ್ಞಾನಸಸಂಬಂಧದಿಂ । ದಾನಂದರಸ ದೊಳಪು
ನಾನು ತಂದೆಸೆದ ಸುಗುಣಿ ಸೌಂದರ ಪಾಂಡ್ಯ
ನೀನೆನ್ನ ಪುಣ್ಯದಧಿದೈವ ॥ ೩೨ ॥

ಮನಸಿ ಜಾರಿಯುಪಾದ । ಸನಜನುಂ ಪೊತ್ತ ಪಾ
ವನತೆಯಿಂದರಸುತನವಾಂತವೇಳ್ಕ್ರ ಶ
ರನಲಿ ಸಂಪದದೊಳಿರಿಸೆನ್ನ ॥ ೩೩ ॥

ಹರನ ಕೌಪೀನಕ್ಕೆ । ಸರಿಬಾರದಿರೆ ತನ್ನ
ಶರೀರಮುಂ ತೂಗಿದಮರನೀತಿಗಳ ಭಂ
ಟರಭಂಟರಂಘ್ರಿ ಬಿಡದಿರ್ಪೆ ॥ ೩೪ ॥

ಮಿಸುಪ ಲಿಂಗಕೆ ಪೂ । ನಸದಲ್ಲಿ ಗುಡಿಕಟ್ಟಿ
ವಸುಧೆಯೊಳ್ಪೂಜ್ಯನಹ ಪೂಂಸಲೆಯಾಂಡ
ನಸಮಪುಣ್ಯವನೆನಗೆನೆರೆಮಾಳ್ಕೆ ॥ ೩೫ ॥

ನಾಡೆ ಪೊನ್ನಾಂಬಲವ । ನೋಡುವಾತುರತೆಯೊಡ
ಗೂಡಿ ನಿರ್ಮಳತೆದಳೆದತಿರುನಾಳ್ಪೋನ
ರೀಡಾಡಲೆನ್ನ ಭವವನು । ॥ ೩೬ ॥

ಪೊಡವಿ ತೀವಿರೆ ಶಿವನ ಗುಡಿಗಳಂ ರಚಿಸಿದ್ಯ
ವಡೆಯರಡಿದಾವರೆಗಳಂ ನೆನದು ಸುಖಂ
ಬಡೆವೆನೆನ್ನಾತ್ಮ ದಣಿವಂತೆ ॥ ೩೭ ॥

ಅಣಿಯರದ ಭಕ್ತಿ ಧಾ । ರುಣಿಗೆ ಪೊಸತಾಗಿ ನು
ನ್ನಣೆಯೊಳೀಶಂಗೆ ಶಿವಲಿಂಗಮಿತ್ತ ಕಲಿ
ಗಣನಾಥನೆನ್ನ ಕುಲಗುರು ॥ ೩೮ ॥

ಪರಮನಂ ಮಾನಸಾಂ । ತರದೊಳರ್ಚಿಸಿ ಮುಕ್ತಿ
ಕರುಣೆಯೊಳಗಲ ದಿಹಪೋಹಿಲರೆನ್ನ
ದುರಿತ ಸಂಕುಳವನೋಡಿಸುವರು ॥ ೩೯ ॥

ಪೆಂಕಲದಿಯಾಗಿ ಶಂ | ಕರ ಪ್ರಾಣಿಗ್ಗೆಯ್ದು ಭಾ .
ಸುರ ಗಣ ನಿಕಾಯದೊಳು ಸಂದ ಕಳಚಂಗೆ
ಪೆದುವೊಳೆಯೆನಗೆ ದಯವಾಗು ॥ ೪೦ ॥

ಕಡು ನೇಹದಿಂ ಕಲ್ಬೊ | ಳಿಡೆ ಪ್ರಾಣಗಂದೀಕ್ಷ
ಸೊಡನೊಲಿವನೆಂದು ಬಗಳೆ ಸಾರಿದ
ಕಾಂಶ್ಯರಣಿಗಳಿಂಲೆನ್ನ ಶಿರದಲ್ಲಿ ॥ ೪೧ ॥

ಪರಮಂಗೆ ಪಾಲ್ಗರೆಂದು | ಗಿರಿಜೆ ಪತುವೇಷವಂ
ಧರಿಪ ಬರೆ ಕಾಯ್ದು ಕರುಣಸಾಗರನೆನಿಪ
ತಿರುಮೂಲರೆನ್ನ ಸುರಧೇನು ॥ ೪೨ ॥

ಮನವಾರೆ ದೇವಾಂಗ | ವಸು ನೆಯ್ದು ಚರ್ಮಾಂಬ
ರನಗಣರಿಗಿತ್ತು ಮೆರೆದ ಸ್ವೈಸರಪಾದ
ವನಜವೆನ್ನೆದೆಯೊಳೆದಿರುತಿರ್ಕೆ ॥ ೪೩ ॥

ಅಣುವಿಲ್ಲದಿರಲಗ್ಗ | ವಣಿ ಶರ್ವನಂಘ್ರಿಯೊಳ್
ಗೆಣಿಸಿ ಕೊಣದೊತ್ತಿ ಮಳೆಗಾಲಂ ಪಡೆದಪಗಲ್
ತೊಣೆಯಾಂಡರೆನ್ನ ಸುಖಸಿಂಧು ॥ ೪೪ ॥

ಜಗಜೇಶನಿಗೆ ತಮ್ಮ | ಸೆಂಗಸುತಿಹ ಮೊಳಕ್ಕೈಯ್ಯ
ಳೊಗೆದ ಗಂಧವ ನೆರವಿಸಿದೊಲಘಂಡ ಮೂ
ರ್ತಿಗಳೆನ್ನ ಹರ್ಷಸುರಭೂಜ ॥ ೪೫ ॥

ನಲಿದಿಕ್ಕಿ ಧೂಪವಂ | ನೆಲನರಿಯೆ ಶಿವಲಿಂಗ
ದೊಲವನ್ನೈಯ್ವಾರವೆನೆತಿರ್ದಿದಮಳಕೊಂ
ಗಿರಿಯ ಕಲಿಯರ್ಗೆಮಣಿಯುವೆನು ॥ ೪೬ ॥

ಅಂಬಿಕಾವಲ್ಲಭ ನೊ | ಪಂಬಡದೆ ಶಿರೋಜಂಗ
ಳಿಂ ಬೆಳಗನಿತ್ತ ಪುರುತ ಕಣಂಬುಲ್ಲ
ನಂಬಿ ಪೂರಿಯೆನ್ನೆಡವಿಡದೆ ॥ ೪೭ ॥

ಇಂದುಧರ ನಿದಿರಿಸೊಡ | ರಂಪವಳಿವುತ್ತ ಮಿರ
ಲಂಪು ನಿಜರುಧಿರವೆರೆದಚ್ಚ ಕಲಿಯಾನ
ಕೊಂದಿಸೆನಗಂಧವರಿವನು || ೪೮ ||

ಮಳೆಯೊಳ್ಳೈತರೆಶೂಲಿ | ಪೊಳೆವಿತ್ತನಟ್ಟು ಭೂ
ತಳವರಿಯಲಿಕ್ಕಿ ದಿನೆಯಾಂಡಗುಡಿಪೂತ
ರೆಳಸಿ ಮಾಡೆನಗಿನ್ನು ಮುದವನು || ೪೯ ||

ವರಮೂಲಮಂತ್ರವನೆ | ಹರಣವಾಗುಚ್ಚರಿಸಿ
ಪರಮನೊಲುಮೆಯನು ಪಡೆದ ಮುರುಗರಚರಣ
ವಿರಲೆನ್ನ ಮಾನಸದೊಳೊಂದಿ || ೫೦ ||

ತಿಳಿದು ಪಂಚಾಕ್ಷರವ | ಕೊಳಲೊಳೂದುತ್ತ ನಿರ್ಮಳ ಶಿವ
ನಿಳಯವನು ಪೊಕ್ಕವರಚೊಕ್ಕನೈನಾರ
ನೆಳಸಿ ಮನವಾರೆ ನೆನೆಯುವೆನು || ೫೧ ||

ಸರಸಮಯಗಾನದಿಂ | ಪುರೆಗಕುಂಪಲನೊಪ್ಪು
ತಿರೆ ಪಾಡಿಮೆರೆದ ತಿರುನೀಲಕಂಠನೀ
ನಿರತಮಿರೆನ್ನ ಬಗೆಯಲ್ಲಿ || ೫೨ ||

ವಾಸವಾದಿಗಳರಿಯ | ದೀಶನಂ ನಿಜಯೋಗ
ವಾಸಕ್ಕೆ ಬರಿಸಿ ಧರೆಗೆತೋರಿಸಿದ ಪೂ
ಮಾಸಿಮಾರರನೆ ಬಲಗೊಂಬೆ || ೫೩ ||

ಧಾರುಣಿಗೆ ಬರಿಸಿ ಮುದ | ನಾರಿಯುಣ್ಣಗಿಸಿ ಮನ
ವಾರೆ ಗಣಪದವಳೊಳಕೊಂಡಕಡಪ್ಪೂರ
ಕಾರಿ ಸಹಕಾರಿಯೆನಿಸೆನ್ನ || ೫೪ ||

ನಡೆತರುತೆ ಮಳೆಯೊಳಿರು | ಳೆಡೆಹರಹರಾ ಯೆಂ
ದೊಡನೆ ಬಂದೀಶನೊಂಪೆಂದ ನಮಿನಂದಿ
ಕೊಡಲೆನಗತಿ ಧರ್ಮರತಿಯನು || ೫೫ ||

ಕೊರಳ ವಿಷಮುಂಕಂಡು । ಮರಣವಹುದೆಂದು ಭವ
ಹರನಸಾರ್ಕೈವ್ರತಿಹ ರುದ್ರಪಶುಪತಿಗೆ
ಶರಣೆಂದು ಸಿದ್ಧಿ ಪಡೆಯುವೆನು ॥ ೫೬ ॥

ಮುಕ್ಕಣ್ಣನಿಗೆ ಶಲಧಿ । ತಕ್ಕುದಲ್ಲೆಂದುಬಗೆ
ಮಿಕ್ಕು ತೂಸಿರಿದ ಸತಿಗೆ ಪತಿಯುಹ ನೀಲ
ನಕ್ಕರಿಂದಹಿತವನು ಗೆಲುವೆ ॥ ೫೭ ॥

ಮೊದಲು ಸಿಕ್ಕಿದ ಮೀನ । ಮುದದಿಶಿವಗೆಂದು ಬಿಡು
ವುದರಿಂದೆ ವಿಮಲನೆನಿಸಿದತಿಭಕ್ತನೀ
ನೊದವಿಸಾನಂದಘನವನು ॥ ೫೮ ॥

ಬಿಡದೆವಾಗೀಶನಂ । ಮೃಡನೆಂಬನಿಷ್ಠೆಯು
ಪಿಡಿದು ಗಣಪದವ ನೊಡನೈದ್ದಿದಾವ್ರೂತ
ಯೆಡೆಯುರಂ ಕೀರ್ತಿಸುವೆನೊಪ್ಪಿ ॥ ೫೯ ॥

ಜಗವರಿಯೆ ಜೂಜಿನಿಂ । ದೊಗೆದರ್ಥವನೆ ಶರಣ
ರುಗಳಿತ್ತ ಭವನೊಡನಾಡನಾಡಿ ಗೆಲಿದೊಸಗೆ
ಮಿಗೆಯುಚ್ಯುತರ್ಗೆ ಶಿಶುವಾನು ॥ ೬೦ ॥

ಸಲೆಪಾದಾಂಬುಜವ । ನೊಲಿದು ಪೂಜಿಸಲು ಪಾ
ಲಲನೇಶನೊಪ್ಪಿ ನಿಜಪದವನಿತ್ತ ಚಿರು
ಪುಲಿಯಾಂಡರೆನ್ನ ಸುಖದಾಗು ॥ ೬೧ ॥

ಜನರ್ರೈದೆ ಬವರಕ್ಕೆ । ತನಗಿತ್ತ ಧನವನೆ
ಲ್ಲನಿತನುಳುಹಿಸದೆ ಚೆರಸೇವೆ ಗೈದಧಿಕ
ಮೊನೆಯಾಂಡರೆನ್ನೊಡೆಯನೆಂಬೆ ॥ ೬೨ ॥

ಶರಣರ್ಗೆ ತನಗುಳ್ಳ । ಧರಣಿಯೊಡೆತನವಿತ್ತು
ಪರಮಪದವಾಳುವುಡುಗಣಿಯ ಪೆರುಮಾಳೆ
ವಿರತಿಯನು ಬೇಡುವೆನು ನಿನ್ನ ॥ ೬೩ ॥

ಮನಸಿಜಾರಿಯಭಕ್ತ | ನೆನಿತು ಧನಮಂಬೇಡೆ
ಲನಿತುಮಂಕೊಟ್ಟ | ಕಡುಜಾಗಿ ನರಸಿಂಗ
ಮೊನೆಯಾರು ಶಾಂತಪಿರಿಸೆನ್ನ || ೬೪ ||

ತ್ರಿಣಯನಂ ತಾನೊಲಿದು | ಗಣಿಕೆಯರ ಮನೆಗೆ ಜಂ
ಟಣಿಯಾಗಿ ನಡಸಿದಧಿಕನಂಬಿಗೆ ಮನಂ
ದಣಿವಂತೆ ನಮಿಸಿ ನಲಿವೆನು || ೬೫ ||

ಪೊಡವಿ ಬಣ್ಣಿಸೆ ದೇವ | ರೊಡೆಯನೊಲುಮೆಯನೊಪ್ಪ
ಪಿಡಿವ ಸೌಂದರನಪಿತನಾಗಿ ಜಸವೆತ್ತ
ಜಡೆಯನೃನಾರ ಸುತನಪ್ಪೆ || ೬೬ ||

ಭೂವಿನುತನಂಬಿಯನು | ಮಾವರನ ಕರುಣದಿಂ
ಬೋವಿಪಡೆದಮಲ ತರುಣಿ ಯನ್ಯಜ್ಞಾನ
ದೇವಿಯರ ಸೂನು ದಿಟವಾನು || ೬೭ ||

ನಂಬಿಯಣ್ಣನ ಮನದೊ | ಳಂಬಾಗೆ ಮುಂದೆ ಗುಡಿ
ಯುಂಬಿಡದೆ ಪಿಡಿದು ನಡೆದಸಿರುವಾಳವಿ ಕು
ಸುಂಬರಂಕುರ್ತು ನಮಿಸುವೆವು || ೬೮ ||

ಶಿವನನಮಲ್ಲಡಿ ನೋಯ | ಲವನಿಯೊಳು ನಡಸುತಿರೆ
ತವೆಮುಳಿದು ನಂಬಿಯೊಳು ಸಂದಕಲಿಕಾಮ
ನವಿರತಂ ಲೇಸುಕೊಡಲೆನಗೆ || ೬೯ ||

ಕರಿಗೊರಲನಾದೊಡಂ | ಮರೆದು ಶರಣಗೆ ಬಂ
ದೆರಗದಿಹ ನಂಬಿಯೊಡಗೂಡಿ ಪೊರೆಗೆಂಡ
ಮೆರೆಮಿಂಡರಿನಗೆ ಶರಣಕ್ಕೆ || ೭೦ ||

ಪೇಳದ್ವೈದಲು ನಂಬಿ | ಕೇಳಿ ಕೈಲಾಸಕ್ಕೆ
ದಾಳಿಯಿಟ್ಟೆತುಳಬಲ ಚಾರಮನಚರಣ
ದೂಳಿಗಪ ಭಂಟನೆನಿಸುವೆನು || ೭೧ ||

ನೈರಿಪಶರಣ ಸಂಚಾರ | ಮಾರ್ಗದೊಳು ಸುವಿ
ಚಾರದಿಂದಡಿಯನಿಡದೆ ತಲೆಯೊಳು ನಡೆದ
ಕಾರಿಕಾಲಮ್ಮೆ ಪೊರೆಯೆನ್ನ || ೭೨ ||

ಈ ವಿಧದೊಳರವತ್ತು | ಮೂವರ ಚರಿತ್ರವನು
ಮೂವರನ ಕರುಣಶರಧಿಮಿಗೆ ವಿಸಾಧ್ಯತಿಧ
ಲೋವಿ ಕೇಳ್ದವನೆ ಕೃತಕೃತ್ಯ || ೭೩ ||

ಅಂದಿಂದು ಮುಂದೆಸಲ | ನಂದದಾಚರಣೆಯಿಂ
ದಿಂದುಶೇಖರನ ನೊಲಿಸಿದ ಗಣಾವಳಿಯ
ನೆಂದೆಂದೂ ಪಾಡಿದನೆ ಮುಕ್ತಾ || ೭೪ ||

ಶರಣ ರರವತ್ತುಮೂ | ವ್ವರ ಮಹಿಮೆಗಳನಿಂತು
ಬರೆದೋದಿ ಕೇಳ್ದವರ್ಗೆಂದಿಗುಂ ನಿಜಸುಖಂ
ದೊರೆವುದಿಹಪರದೊಳಿದು ಸಿದ್ಧ || ೭೫ ||

ವರಚಿಂತಾಮಣಿಯೆನಿಪ | ಪರಿಪರಿಯ ಶರಣರೆ
ಲ್ಲರ ಮನೋರಥವ ನೊಲಿದಿತ್ತ ಶಂಭು ನೀ
ನಿರಿಸೆನ್ನ ನವರ ಸಭೆಯಲ್ಲಿ || ೭೬ ||

ಇಂತು ನಿಜಗುಣಯೋಗಿ | ಸಂತಸದೊಳೊರೆದ ನ
ನಂತಮಹಿಮಾಂಬುನಿಧಿ ಶಂಭು ತಾನೊಪ್ಪಿ
ಸಂತರಿಂ ಪಾಡಿಸುತಮಿರ್ಕೆ || ೭೭ ||

ಇಂತು ನಿಜಗುಣ ಶಿವಯೋಗೀಂದ್ರವಿರಚಿತವಾದ ಅರವತ್ತುಮೂರು
ಮಂದಿ ಪುರಾತನರ ತ್ರಿವಿಧಿ ಸಂಪೂರ್ಣಂ.

---

ಭಕ್ತಿ ಎಂತಹದಯ್ಯ? ದಾಸಯ್ಯ ಮಾಡಿದಂಥಾದ್ದಯ್ಯಾ! ಭಕ್ತಿ ಎಂತಹದಯ್ಯ? ಸಿರಿಯಾಳ ಮಾಡಿದಂಥಾದ್ದಯ್ಯ! ಭಕ್ತಿ ಎಂತಹದಯ್ಯ? ಸಿಂಧು ಬಲ್ಲಾಳ ಮಾಡಿದಂಥಾದ್ದಯ್ಯಾ! ಭಕ್ತಿ ಎಂತಹದಯ್ಯ? ಕೂಡಲ ಸಂಗಮದೇವಾ, ನೀನು ಬಾಣನ ಬಾಗಿಲ ಕಾದಂಥಾದ್ದಯ್ಯ.

ನೆರೆನಂಬೋ, ನೆರೆನಂಬೋ, ಹರಹುರವಿಲ್ಲದೆ ಸಾಮವೇದಿಗಳಂತೆ. ನೆರೆನಂಬೋ, ನೆರೆನಂಬೋ, ದಾಸ ದುಗ್ಗಳೆಯಂತೆ. ನೆರೆನಂಬೋ, ನೆರೆನಂಬೋ, ಸಿರಿಯಾಳ ಚಂಗಳೆಯಂತೆ. ನೆರೆನಂಬೋ, ನೆರೆನಂಬೋ, ಸಿಂಧು ಬಲ್ಲಾಳನಂತೆ. ನಂಬಿದೆಯಾದರೆ ತನ್ನನೀವ ಕೂಡಲ ಸಂಗಮದೇವ.

ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತು ನೋಡಿರೆ. ಅನ್ನೆಚಂಗಳೆ ನೀನಿದ್ದೀರೇಳು ಕೇಳುವೆರು,ಲಿಂಗದ ನೋಂಪಿಯ ನೋಂತರೇ ಹೇಳಾ? ಕೂಡಲ ಸಂಗಮ ದೇವಂಗೆ ಬಿಲ್ಲಾಳ ನೆಂಬ ಮಗನೆ ಬಾಗಿಸವ ಸಿಕ್ಕಿದರೆ ಹೇಳಾ?

ವೇಷ ಅವಿಚಾರದಲ್ಲಿ ನಡೆಯಿತ್ತೆಂದು ಅಸುರದಲ್ಲಿ ಕುನ್ನಿ ನೀ ಕೇಳಾ! ಹರಿಯನೆ ದಾಸನ ವಸ್ತ್ರವ? ಉಣ್ಣನೇ ಚನ್ನಯ್ಯನ ಸಂಗಡ? ಪರವಧುವ ಕೊಳ್ಳನೇ ಸಿಂಧು ಬಲ್ಲಾಳನ? ಬೇಡನೇ ಸಿರಿಯಾಳನ ಮಗನ? ಸಹೆತ್ತುದು ಮಾಡಿದುದು ಅವಿಚಾರವೆಂದು ಭಾವವಿಭಾವವೆಂದು ಕಂಡೆನಾದರೆ, ತಪ್ಪೆನ್ನದು ಮೂಗಕೊಯ್ಯಿ ಕೂಡಲ ಸಂಗಮ ದೇವಾ.

ದೇವ ನಿಂತವನೆಂದು ತೋರಿ ಕೊಡುವೆ ಗಣಂಗಳಿಗೆ. ಬಲ್ಲಾಳನ ವಧುವ ಬೇಡಿದಾತ ನೀ ದೇವಾ! ದೇವ ನಿಂತವನೆಂದು ತೋರಿ ಕೊಡುವೆನು ನಾನು ಗಣಂಗಳಿಗೆ. ದಾಸನ ವಸ್ತ್ರವ ಬೇಡಿದಾತನೀ ದೇವಾ! ದೇವನಿಂತವನೆಂದು ತೋರಿಕೊಡುವೆನು ನಾನು ಗಣಂಗಳಿಗೆ. ಸಿರಿಯಾಳನ ಮಗನ ಬೇಡಿದಾತನೀದೇವಾ. ಕೂಡಲ ಸಂಗಮದೇವಾ, ಜಂಗಮಮುಖ ಲಿಂಗವಾದ ನಾಗಿ ಕಾಡಿ ನೋಡುವನು, ಮತ್ತೆ ಬೇಡಿ ನೋಡುವನು.

ದಾಸನ ವಸ್ತ್ರವ ಬೇಡದಮುನ್ನ, ತನನಿಧಿಯ ನಿತ್ತರೆ, ನಿಮ್ಮ ದೇವರೆಂಬೆ. ಸಿರಿಯಾಳನ ಮಗನ ಬೇಡದಮುನ್ನ, ಕಂಚಿಯಪುರವ ಕೈಲಾಸಕ್ಕೊಯ್ದರೆ, ನಿಮ್ಮ ದೇವರೆಂಬೆ. ಬಲ್ಲಾಳನವಧುವ ಬೇಡದಮುನ್ನ, ಸ್ವಯಂ ಲಿಂಗ ಹಾಪರೆ, ನಿಮ್ಮ ದೇವರೆಂಬೆ. ದೇಹಿ ನೀನು ವ್ಯಾಪಾರಿಗಳು ನಮ್ಮವರು. ಹೋಹು ಕೂಡಲ ಸಂಗಮದೇವಾ ಎಮ್ಮವರ ಕೈಯಲ್ಲೂ.

ದ್ವಿಜನಿಗೆ ಕೊಟ್ಟು, ಹಲಬರು ಕೆಟ್ಟರು. ಉದ್ಧರಿಸುವನೊಬ್ಬ ಶಿವಶರಣ ಸಾಲದೇ? ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ದಾನವ ಬೇಡಿದ. ಕೊಟ್ಟ ಬಲಿ, ಬಂಧನಕ್ಕೊಳಗಾದ. ಶಿವ ಜಂಗಮನಾಗಿ ಬಂದು, ದಾಸನ ವಸ್ತ್ರವ ಬೇಡಿದ. ಕೊಟ್ಟ ದಾಸ ತವನಿಧಿಯ ಪಡೆದ. ನಾರಾಯಣ ಹಾರುವನಾಗಿ ಬಂದು, ಕರ್ಣನ ಕವಚವ ಬೇಡಿದ. ಕೊಟ್ಟ ಕರ್ಣ, ಕಾಳಗದಲ್ಲಿ ಮಡಿದ. ಶಿವನಾರಿ ಜಂಗಮನಾಗಿ ಬಂದು, ಸಿರಿಯಾಳನ ಮಗನ ಬೇಡಿದ. ಕೊಟ್ಟ ಸಿರಿಯಾಳ, ಕಂಚಿಯ ಪುರವ ಕೈಲಾಸಕ್ಕೊಯ್ದ. ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು, ಕೂಡಿರೇ ನಮ್ಮ ಕೂಡಲ ಸಂಗನ ಶರಣರಿಗೆ.

ಸೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ.

ನಮ್ಮ ತಾಯಿ ನಿಂಬವ್ವೆ, ನೀರನೆರೆದುಂಬಳು. ನಮ್ಮಯ್ಯ ಚನ್ನಯ್ಯ ಕಾಯ ಕಂಕಣವ ಹೊತ್ತವ. ಎಮಗಾರು ಇಲ್ಲವೆಂಬಿರಿ. ನಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು. ನಮಗಾರು ಇಲ್ಲವೆಂಬಿರಿ. ಎಮ್ಮಜ್ಜ ರಜ್ಜಕು ಹಿಡಿದ ಭಕ್ತಿಯ ನಿಮ್ಮ ಕೈಯಲ್ಲಿ ಕೊಂಬೆ, ಕಾಣಾ ಕೂಡಲ ಸಂಗಮ ದೇವಯ್ಯಾ.

**ಹರಿಹರಕವಿ ಸು 1100—1200 ರಗಳೆಯ ಸೂಚನೆ**

ಮೂವತ್ತಾರನೆಯ ಸಿರಿಯಾಳನಾದ ಚಿರುತೊಂಡನು ಹಸಿದು ಬಂದ ಪಶುಪತಿಗೆ ಹಸನಾಗಿ ಶಿಶುವ ನಟ್ಟು ಮತ್ತೆ ಪಡೆದು ಕರ್ತನೊಳು ನಿತ್ಯನಾದನು.

ಭೀಮಕವಿ ಸು 1350 ಬಸವಪುರಾಣ

ಗರಳಕಂಧರ ಮೂರ್ತಿ ನೋಡುತ
ಧರೆಯೊಳಿಂತಪ್ಪನ್ನದಾತರು
ಸ್ಮರಿಸುವೆ ರಾರಯ್ಯನ್ನಿನಗತಿಸಾಂಗವಾಯಿತು
ನಿರುತ ವಾನೆಡೆಯೊಳು ಸಮಾನವ
ನ್ನೊರೆಯಲಿಲ್ಲದ ಭೀಷ್ಮದಾನವ
ನ್ನೆರರೆ ಯಮಗಿಕ್ಕಿದೆಯಿಂದಕೆ ತಕ್ಕೊಂದು ಫಲವುಂಟು.

ಸುರಂಗಕವಿ ಸು 1500 "ತ್ರಿಷಷ್ಟಿ ಪುರಾತನ ವಿಲಾಸ"

ಹರವರ ಕೃಪೆಯಿಂದಿವರ್ಗ
ಸಿರಿಯಾಳಂ ಚಂಗಳವ್ವೆ ತಮಗೀಶ್ವರಭ
ಕ್ತರಿ ತಾಯ್ತಂದೆಗಳೆನುತಂ
ಪಿರಿದು ಬೆಸಕೆಯ್ವುತಿರ್ದರದನೇವೊಗಳ್ವೆಂ.

ಧರೆಯೊಳ್ಸಿರಿ ಯಾಳಂಗಾ
ರ್ಪೊರೆ ಗುಣನಿಧಿ ಚಂಗಳವ್ವೆಗಾವರ್ಪಾನಟಿ ಸ
ಚ್ಚರಿತದ ಚೀಲಾಳಂಗಾ
ರ್ಸರಿಯೆನುತಂ ಗಿರಿಜೆಗೆ ಅಭವನೊಲವಿಂ ನುಡಿದಂ.

ವಿರಕ್ತ ತೋಂಟದಾರ್ಯರ್ ಸು. 1560 ಪಾಲ್ಕುರಿಕೆ ಸೋಮನಾಥ ಪುರಾಣ

ಸುತನ ಚೀಲಾಳನಂ ವಧಿಸಿ ನಲವಿಂ ಶಿವಂ
ಗತಿ ಹಲುಸದಿಂದಿತ್ತು ಕೈಲಾಸಕೆಯ್ದಿ * *
* * ಸಿರಿಯಾಳ *

ಚಿರುತೊಂಡನಂತೆ ಶಿವಗಂ ಸುತನ ಕಡಿದಿಕ್ಕಿ
ಪಿರಿದೆನಿಸಿ ಯೊಡೆಯನ ಪುರಕ್ಕೆ ಪೋದರಿಬ್ಬರೆಂದು.
ಸಿರಿಯುದು ಕೊಂಡಾಡುತಿರ್ದ * *

ಪ್ರೀತನಾಸಂಭ್ರಮ ನಾನೆ ಸರ್ವಜನಸಮಂ ಕೊಂಡಾಡೆ ಬೇಲಾಳನಾ
ಪ್ರತಿ ಪಾದಾಂಬುಜಕೇಳ್ದು ರುತ್ರಗೆ ನೀನಾರೋಗಿಸಿನ್ನೆಂದು ಪಾ
ರ್ವತಿಯಾಣ್ಮಂಗೆನೆ ಶಿಷ್ಟಕಂಡವರ ಸಮ್ಯಗ್ಭಕ್ತಿಯಂ, ವಿಶ್ವವಿ
ಶ್ರುತ ತೇಜೋನಿಧಿ ಪುಚ್ಚಿ ತನ್ನ ನಿರೂಪಂ ತೋರಿದಂ ಸಲ್ಲಿಯಿಂ.

ಪರಮಚಿರುತೊಂಡನಾಹೇ
ಶ್ವರಂಗೆ ಚಂಗಳಿಗೆ ನಿಸುಪ ಬೇಲಾಳಂಗಾ
ಪ್ಪರಪೇಳುಕೇರಿಯ ಜನೋ
ತ್ಕರಕ್ಕೆ ಪುರವೈರಿ ಬರಿಸಿದಂ ಪುಷ್ಪಕಮಂ.

† ವಿನಯಕ
ಲಾಪಂ ಕುಲದೀಪ ನಭವಲಾಂಛನವರ ಸೇ
ಪಾಪರ ನಿಸರ್ಗ ದುರಿತದು
ರಾಪಂ ಶಿರಿಯಾಳನೆಂಬ ಸತಿಸಂಪದದಿಂ.

---

## ಪರಿಶಿಷ್ಟ (ಈ)

## ಕವಿಗಳ ಸಂಕ್ಷಿಪ್ತ ಪರಿಚಯ

### ತಿರುಜ್ಞಾನ ಸಂಬಂಧಿಗಳು (ಪಿಳ್ಳೈನಾಯನಾರ್) ಸು. 600

ತಮಿಳುನಾಡಿನ ಸುಪ್ರಸಿದ್ಧರಾದ ನಾಲ್ವರು ಶೈವಸಮಯಾಚಾರ್ಯರಲ್ಲಿ ಮಕುಟ ಪ್ರಾಯರಾದವರಿವರು. ಶಿವ ಸರ್ವೋತ್ತಮತ್ವವನ್ನು ಸಾರುವ ಶಿವತತ್ತ್ವದ ಪ್ರಾಶಸ್ತ್ಯವು ಇವರಿಂದ ಬೆಳೆಯಿತು. ಚೋಳ ಮಂಡಲದ ಶಿಯ್ಯಾಳಿಯೆಂಬುದು ಇವರ ಊರು; ಜಾತಿ ಬ್ರಾಹ್ಮಣ ಜಾತಿ; ತಂದೆ ಶಿವಪಾದಹೃದಯರೆಂಬ ಮಹಾತ್ಮರು; ತಾಯಿ ಪತಿವ್ರತಾ ಶಿರೋಮಣಿ

ಯಾದ ಭಗವತಿಯಾರ್. ಅರುವತ್ತು ಪುರಾತನರಲ್ಲಿ ಇವರೂ ಒಬ್ಬರು. ಪ್ರಪಂಚದ ಜೀವರಾಶಿ ಗೆಲ್ಲಾ ಮುಕ್ತಿ ಮಾರ್ಗವನ್ನು ತೋರುವುದಕ್ಕಾಗಿ ಕುಮಾರ ಸ್ವಾಮಿಯೇ ತಿರುಜ್ಞಾನ ಸಂಬಂಧಿಗಳಾಗಿ ಜನ್ಮ ತಾಳಿದರೆಂದು ಬಹು ಜನರ ನಂಬಿಕೆಯಿದೆ. ಇವರ "ತಿರುಚೆಂಗಾಟ್ಟಂಗ ಕುಡಿ ಪದಿಕಂ" ಎಂಬ ಪದ್ಯಮಾಲೆಯಿಂದ ಇವರು ಸಿರಿಯಾಳನ ಸಮಕಾಲೀನರೆಂದು ನಿಶ್ಚಯಿಸಲು ಅನುಕೂಲವಾಗಿದೆ.

## ಸುಂದರಮೂರ್ತಿ ನಾಯನಾರ್ ಸು. 900

ತಿರುಮುನೈಪ್ಪಾಡಿಯಲ್ಲಿ ತಿರುನಾವಲೂರ್ ಎಂಬ ಸ್ಥಳದಲ್ಲಿ ಆದಿ ಶೈವಕುಲದ ಶಡೆಯನಾರ್ (ಜಡೆಯನಾಯನಾರ್) ಎಂಬ ಮಹನೀಯನಿಗೆ ಇಶೈ ಜ್ಞಾನಿಯಾರ್ (ಯಜ್ಞಜ್ಞಾನದೇವಿ) ಎಂಬ ಧರ್ಮಪತ್ನಿಯಲ್ಲಿ "ನಂಬಿಯಾರೂರರ್" ಎಂಬ ಹೆಸರಿನ ಬಾಲಕನು ಜನಿಸಿದನು. ತಿರುವಣ್ಣೈನಲ್ಲೂರಿನಲ್ಲಿ ಇವನಿಗೆ ಶಿವನು ಪ್ರತ್ಯಕ್ಷನಾಗಿ ಇವನಿಗೆ ತನ್ನ ಕೃಪಾಕಟಾಕ್ಷವನ್ನು ಕರುಣಿಸಿದನು. ಅತಿಶಯ ವಾಕ್ಸಾಮರ್ಥ್ಯದಿಂದ ಈಶ್ವರನೊಡನೆ ವಾದಮಾಡಿ ಗೆದ್ದುದರಿಂದ ಈ ಬಾಲಕನಿಗೆ 'ವನ್ ರೊಂಡನ್' ಎಂಬುದಾಗಿ ಹೆಸರಾಯಿತು. ಇವರೇ ಸುಂದರ ಮೂರ್ತಿ ನಾಯನಾರೆಂದು ಈಗಲೂ ಎಲ್ಲರಿಂದಲೂ ಪೂಜಿಸಲ್ಪಡುತ್ತಿದ್ದಾರೆ. ಇವರೂ ಅರವತ್ತುಮೂರು ಪುರಾತನರಲ್ಲಿ ಒಬ್ಬರು ಇವರಿಂದ ರಚಿತವಾಗಿರುವ ಪಿತ್ತಾ ಪಿರೈಶೋಡಿ ಎಂಬ ಸ್ತೋತ್ರ ಸರ್ವ ಜನಪ್ರಿಯವಾಗಿ ಬಳಕೆಯಲ್ಲಿದೆ ಇವರು ಬರೆದ "ತಿರುತೊಂಡತೊಗೈ" ಎಂಬ ಗ್ರಂಥ ಪೆರಿಯ ಪುರಾಣದ ಮೂಲಗಳಲ್ಲಿ ಒಂದು.

## ಪಟ್ಟಿಣತ್ತಾರ್ ಸು. 1100

ಕಾವೇರಿಪೂಂ ಪಟ್ಟಣದಲ್ಲಿ ವೈಶ್ಯಕುಲದಲ್ಲಿ ಹುಟ್ಟಿದ ಇವರನ್ನು ಕುಬೇರನ ಅವತಾರವೆಂದು ಹೇಳುತ್ತಾರೆ. ತಿರುವೆಣ್‌ಕಾಡರ್ ಎಂಬ ಹೆಸರೂ ಇವರಿಗಿದೆ. ವಣಿಕ್ವೃತ್ತಿಯಲ್ಲಿ ಅತಿಶಯವಾಗಿ ಧನವನ್ನೂ ಕೀರ್ತಿಯನ್ನೂ ಸಂಪಾದಿಸಿದರು. ಒಂದು ದಿನ ಇದ್ದಕ್ಕಿದ್ದ ಹಾಗೆ ಗುರುವಿನ ಕಟಾಕ್ಷದಿಂದ

“ಕಡೆಗಾಲಕ್ಕೆ ಒಡೆದು ಸೂಜಿಯು ಕಣ್ಣೂ ಬರುವುದಿಲ್ಲ” ಎಂಬರಿವು ಇವರಿಗೆ ಉಂಟಾಗಿ, ವೈರಾಗ್ಯ ಹುಟ್ಟಲು ಅಂದಿನಿಂದಲೇ ತಮ್ಮೆಲ್ಲ ಸಂಪತ್ತುಗಳ ನ್ನೆಲ್ಲ ತ್ಯಜಿಸಿ ಭಕ್ತರಾದರು.

## ನಂಬಿಯಾಂಡಾರ್ ನಂಬಿ ಸು. 1100

ತಿರುವಾರೂರಿನಲ್ಲಿ ಅಭಯಕುಲಚೋಳನು ಆಳುತ್ತಿದ್ದಾಗ ತಿರು ನಾರೈಯೂರ್ ಎಂಬ ಪುಣ್ಯಕ್ಷೇತ್ರದಲ್ಲಿ ಪೊಲ್ಲಾಪಿಳ್ಳೈಯಾರ್ ಎಂಬ ವಿನಾಯಕಮೂರ್ತಿಯ ಅರ್ಚಕರಾದ ಓರ್ವ ಆದಿಶೈವರಿಗೆ ಒಬ್ಬ ಸತ್ಪು ತ್ರನು ಜನಿಸಿದನು ತನ್ನ ತಂದೆಯೊಮ್ಮೆ ಬೇರೆ ಊರಿಗೆ ಹೋಗಿದ್ದಾಗ ಈತನು ವಿನಾಯಕನಿಗೆ ಪೂಜೆ ನೈವೇದ್ಯಗಳನ್ನರ್ಪಿಸಿ, ದೇವರು ಭುಜಿಸ ದಿರಲು ತನ್ನ ತಲೆಯನ್ನು ಒಡೆದುಕೊಳ್ಳಲು ಪ್ರಯತ್ನಮಾಡಿ ವಿನಾಯಕ ನನ್ನು ಮೆಚ್ಚಿಸಿ ಅವನಿಂದ ಸಮಸ್ತ ವಿದ್ಯಾ ಪ್ರಾವೀಣ್ಯತೆಯನ್ನು ಪಡೆದನು. ಅಲ್ಲಿಂದ ಮುಂದೆ ಇವರಿಗೆ “ನಂಬಿಯಾಂಡಾರ್ ನಂಬಿ” ಯೆಂಬ ಹೆಸರು ಬಂತು. ಇವರ ಕೀರ್ತಿಯನ್ನು ಕೇಳಿದ ಚೋಳರಾಜನು ಕರೆಯಿಸಿ ನಮ ಸ್ಕಾರಮಾಡಿ ಭಕ್ತರ ಮಹಿಮೆಯನ್ನು ಕೇಳಬೇಕೆಂದು ಅಪೇಕ್ಷಿಸಲು ತೇವಾರಗಳನ್ನು ಹಾಡಿದರು. ಇವರೂ ತ್ರಿಪಸ್ತಿ ಪುರಾತನದಲ್ಲಿ ಸೇರಿದವರು. ಭಕ್ತರ ಚರಿತ್ರೆಯನ್ನು ಮುಕ್ತಪದಗ್ರಾಸವಾಗಿ ಗ್ರಂಥ ರಚಿಸಿದ್ದಾರೆ.

## ಶೇಕ್ಕಿಳಾರ್ ಸು. 1100-1200

ತೊಂಡಮಂಡಲದ ಕುನ್ರತ್ತೂರಿನಲ್ಲಿ ವೇಳಾಳ ಕುಲದ ಶೇಕ್ಕಿಳಾರ್ ವಂಶದಲ್ಲಿ ಅರುಣ್ಮೊಳಿದೇವರ್ ಎಂಬ ಹೆಸರಿನಿಂದ ಜನಿಸಿದರು. ತಮ್ಮ ವಂಶವನ್ನು ಪ್ರಖ್ಯಾತಿಗೆ ತಂದುದರಿಂದ ಇವರಿಗೆ ಶೇಕ್ಕಿರಾರ್ ಎಂಬ ಹೆಸರು ಬಂತು. ಇವರ ವಿದ್ಯಾಕೌಶಲ್ಯಾದಿಗಳನ್ನು ತಿಳಿದು ಅನಪಾಯ ಚೋಳಮಹಾರಾಜನು ಇವರನ್ನು ತಮ್ಮ ಮುಖ್ಯ ಮಂತ್ರಿಯಾಗಿ ನಿಯಮಿ ಸಿಕೊಂಡು ‘ಉತ್ತಮ ಚೋಳ ಪಲ್ಲವ’ ಎಂಬ ಬಿರುದನ್ನು ಕೊಟ್ಟನು.

ಇವರಿಂದ ಶಿವಕಥಾಮೃತಪಾನಾಸಕ್ತರಾದ ಚೋಳರಾಜನು ಇವ ರನ್ನೇ ಭಕ್ತರ ಚರಿತ್ರೆಯನ್ನು ಪುಸ್ತಕಾಕಾರವಾಗಿ ರಚಿಸಿಕೊಡಬೇಕೆಂದು

ಕೇಳಿಕೊಂಡನು. ಆಗ ಶೇಕ್ಕಿಳಾರರು ಚಿದಂಬರ ಕ್ಷೇತ್ರಕ್ಕೆ ಹೋಗಿ ಶಿವ ಸನ್ನಿಧಾನದಲ್ಲಿದ್ದುಕೊಂಡು, ಅಶರೀರವಾಕ್ಕಾಗಿ ಬಂದ 'ಉಲಗೆಲ್ಲಾ, ಎಂಬ ಶಬ್ದವನ್ನು ಆದಿಯಾಗಿಟ್ಟುಕೊಂಡು ಪೆರಿಯ ಪುರಾಣವನ್ನು ಬರೆದರು. ಅರುವತ್ತುಮೂರು ಪುರಾತನರ ಚರಿತ್ರೆಯು ಭಕ್ತಿರಸಪೂರಿತವಾಗಿ ಶೋಭಿಸುವ ಈ ಮಹಾಕಾವ್ಯವು ಪ್ರಖ್ಯಾತಿಯಾದುದು. ಈ ಗ್ರಂಥ ಪೂರೈಸಿದಮೇಲೆ ಅದನ್ನು ಗಜಾರೋಹಣದಿಂದ ಅನಪಾಯ ಚೋಳರಾಜನು ಚಿದಂಬರದಿಂದ ತನ್ನೂರಿಗೆ ತಂದು ವೈಭವದಿಂದಲೂ ಭಕ್ತಿಯಿಂದಲೂ ಮೆರೆಸಿದನು. ಶೇಕ್ಕಿಳಾರರು ಚಿದಂಬರದಲ್ಲಿಯೇ ನಿಂತು ಶಿವಧ್ಯಾನ ತತ್ಪರವಾಗಿದ್ದು, ಕಡೆಯಲ್ಲಿ ಸಭಾನಾಯಕರ ಪಾದಾರವಿಂದಗಳಂ ಪಡೆದರು.

## ಪರಂಜ್ಯೋತಿ ಮುನಿವರರು ಸು. 1600

ಇವರು ಹುಟ್ಟಿದ್ದು ವೇದಾರಣ್ಯ; ಇದ್ದ ಸ್ಥಳ ಮಧುರೆ, ತಮ್ಮ ಅತಿಶಯ ತಪೋನಿಷ್ಠೆಯಿಂದ ಎಲ್ಲರ ಗೌರವ ಭಕ್ತಿಗಳಿಗೆ ಪಾತ್ರರಾಗಿ ಇವರು ಪರಂಜ್ಯೋತಿ ಮುನಿವರರೆಂಬ ಹೆಸರು ಪಡೆದರು. ಪ್ರೌಢ ವಿದ್ವಾಂಸರಾದ ಇವರು ವ್ಯಾಕರಣವನ್ನೂ ಸಂಘ ಸಾಹಿತ್ಯವನ್ನೂ ಪೆರಿಯ ಪುರಾಣ ಮುಂತಾದ ಶೈವಕಲೆಗಳನ್ನೂ ರಚಿಸಿದ್ದಾರೆ.

## ಶ್ರೀನಾಥ ಸು. 1300-1400

ಕವಿಸಾರ್ವಭೌಮನೆಂಬ ಬಿರುದಾಂಕಿತನಾದ ತೆಲುಗಿನ ಮಹಾಕವಿ ಇವನು. ತಾನು ಕನ್ನಡಿಗನೆಂಬ ಹೆಮ್ಮೆಯನ್ನು ಹೇಳಿಕೊಂಡಿದ್ದಾನೆ. ಪಂಡಿತಾರಾಧ್ಯ ಚರಿತ್ರೆ ಶೃಂಗಾರನೈಷಧ, ಹರವಿಲಾಸ ಇತ್ಯಾದಿ ಗ್ರಂಥಗಳನ್ನು ತೆಲುಗಿನಲ್ಲಿ ಬರೆದಿದ್ದಾನೆ. ಹರವಿಲಾಸದಲ್ಲಿ ಎರಡು ಆಶ್ವಾಸಗಳಲ್ಲಿ ಸಿರಿಯಾಳನ ಆಖ್ಯಾನವಿದೆ. ಈತನು ಮಹಾಕವಿ.

## ಬಸವೇಶ್ವರರು ಸು. 1100-1200

ವೀರಶೈವ ಮತೋದ್ಧಾರಕರಾದ ಈ ಮಹಿಮರನ್ನು ಕುರಿತ ಪರಿಚಯವು ಕನ್ನಡಿಗರಿಗೆಲ್ಲ ಬೇಕಾಗಿಲ್ಲ.

## ಹರಿಹರ ಕವಿ ಸು. 1100-1200

ಕರ್ಣಾಟಕ ಸಾಹಿತ್ಯದಲ್ಲಿ ಹರಿಹರನು ಅಪೂರ್ವ ಮೂರ್ತಿ ಸ್ವರೂಪದ ಅದ್ಭುತ ಶಕ್ತಿಯ ಮಹಾಕವಿಯಾಗಿದ್ದಾನೆ. ಕಾವ್ಯ ಪ್ರಪಂಚದಲ್ಲಿ ನವಯುಗ ನಿರ್ಮಾಪಕನಿವನು. ಕವಿಯೆಂದೂ, ಜ್ಞಾನಿಯೆಂದೂ, ಧಾರ್ಮಿಕ ಪುರುಷನೆಂದೂ, ಭಕ್ತಾಗ್ರೇಸರನೆಂದೂ, ಶಿವಯೋಗಿಯೆಂದೂ ಅವತಾರ ಪುರುಷನೆಂದೂ ಈತನನ್ನು ಅನೇಕರು ಅನೇಕವಿಧವಾಗಿ ಬಣ್ಣಿಸಿರುವರು. ಭಕ್ತಿಭಾವ ನಿರೂಪಣೆಯಲ್ಲಿ ಅದ್ವಿತೀಯನೆಂದು ಇವನು ಹೊಗಳಿಸಿಕೊಂಡಿರುವನು. ಶಿವಪೂಜೆ, ಶಿವಸ್ತೋತ್ರಗಳಲ್ಲಿ ಇವನನ್ನು ಮೀರಿಸಿದವರಿಲ್ಲ."ಶಶಿಭೂಷಂಗೆ ಈಶ್ವರಂಗೆ ಐದೆ ನಾಲಗೆಯನ್ ಮಾರಿದೆನ್'' ಎಂದು ಹೇಳಿ ಕೇವಲ ಶ್ರದ್ಧಾ ಭಕ್ತಿಯಿಂದ ವಿರೂಪಾಕ್ಷನ ಆಧಿಕ್ಯವನ್ನು ಸೂಚಿಸಿದ್ದಾನೆ. ರಗಳೆ ಕವಿಯೆಂಬ ಅಪಹಾಸ್ಯಕ್ಕೀಡಾದರೂ ರಗಳೆಗಳಿಂದ ಇವನ ಕೀರ್ತಿ ಹೆಚ್ಚಿತೇ ಹೊರತು ಇವನು ಅದಕ್ಕಾಗಿ ತಲೆತಗ್ಗಿಸಬೇಕಾಗಿಲ್ಲ. ಈತನು ಗಿರಿಜಾಕಲ್ಯಾಣ, ಪಂಪಾಶತಕ, ಶಿವಶರಣರ ರಗಳೆಗಳು, ಮುಡಿಗೆರೆಯ ಅಷ್ಟಕ ಎಂಬ ಗ್ರಂಥಗಳನ್ನೂ ಬರೆದಿದ್ದಾನೆ.

## ಭೀಮ ಕವಿ ಸು. 1350

ಇವನು ಶಿವಕವಿದೇವನ ಮಗನು. ಶಿವಯೋಗ ನಿದ್ರೆಯೊಳಿರಲು ಪಾಲ್ಕುರಿಕೆ ಸೋಮೇಶ್ವರನು ಕನಸಿನಲ್ಲಿ ಬಂದು ಹೇಳಿರುವಂತೆ ಕನ್ನಡ ಬಸವಪುರಾಣವನ್ನು ಬರದೆನೆಂದು ಹೇಳಿದ್ದಾನೆ. ಇವನು ವೀರಶೈವಕವಿ; ಉಭಯಕವಿತಾ ಸಮರ್ಥನು. ಬಸವಪುರಾಣ, ಬೀಮಕವೀಶ್ವರರಗಳೆ ಮತ್ತು ಭೃಂಗಿದಂಡಕ ಇವು ಈತನ ಗ್ರಂಥಗಳು. ಬಸವಪುರಾಣದಲ್ಲಿ ಸಿರಿಯಾಳನ ಚರಿತ್ರೆಯಿದೆ.

## ಸುರಂಗಕವಿ ಸು. 1500

ಈತನು ವೀರಶೈವಕವಿ. ಇವನ ತಂದೆ ಸಂಗಮವಿಭು, ತಾಯಿ ಮಹಾದೇವಿ. ಇವನ ಸ್ಥಳ ಪುಲಿಗೆರೆ ಯೆಂದು ಅಭಿಪ್ರಾಯವಿದೆ. "ಮನುಜ ಸ್ತುತಿಯಂ ಬಿಟ್ಟು ಸುರಂಗಕವಿ ನಾಲಗೆಯಂ ಗಿರಿಶಂಗೆ ಮಾರಿದಂ "ಎಂದು ಹೇಳಿದ್ದಾನೆ. ಈತನ ತ್ರಿಷಷ್ಟಿ ಪುರಾತನದ ಚರಿತ್ರೆಯಲ್ಲಿ ಸಿರಿಯಾಳನ ಕಥೆಯೂ ಇದೆ.

## ಶ್ರೀ ನಿಜಗುಣ ಶಿವಯೋಗಿ ಸು. 1500

[ಶಂಭುಲಿಂಗನ ಬೆಟ್ಟದ ಬಳಿ ನಿಜಗುಣಾರಾಧ್ಯನೆಂಬ ಹೆಸರಿನಿಂದ ರಾಜ್ಯವಾಳುತಿದ್ದ ಅರಸು ವಿರಕ್ತನಾಗಿ ಆ ಬೆಟ್ಟದಲ್ಲಿ ನಿಂತು ಶಿವಯೋಗದಲ್ಲಿ ತತ್ಪರನಾದನೆಂದೂ ಆ ಬಳಿಕ ಅವನಿಗೆ ಶ್ರೀ ನಿಜಗುಣ ಶಿವಯೋಗಿ ಎಂದು ಹೆಸರು ಬಂದಿತೆಂದು ಹೇಳುತ್ತಾರೆ. ಈತನು ಲಿಂಗ ಯಜ್ಞೋಪವೀತ ಗಳನ್ನು ಧರಿಸಿದ ಆರಾಧ್ಯ ಬ್ರಾಹ್ಮಣನು. ಈತನ ಹೆಸರನು, ಕೇಳದ ಕನ್ನಡಿಗರು ಯಾರೂ ಇಲ್ಲವೆಂದು ಹೇಳಬಹುದು. ಈತನ ಹಾಡುಗಳು ಸುಪ್ರಸಿದ್ಧವಾಗಿವೆ. ಅನುಭವಸಾರ, ಅರುವತ್ತು ಮೂವರ ತ್ರಿವಿಧಿ, ಕೈವಲ್ಯ ಪದ್ಧತಿ, ಪರಮಾನು ಬೋಧೆ, ಪರಮಾರ್ಥ ಗೀತೆ, ಪರಮಾರ್ಥ ಪ್ರಕಾಶಿಕೆ ವಿವೇಕ ಚಿಂತಾಮಣಿ ಎಂಬ ಈತನ ಆರು ಗ್ರಂಥಗಳು ಪಟ್ಟಾ ಸ್ತ್ರಗಳೆಂದು ಪ್ರಸಿದ್ಧಿಯಾಗಿವೆ.]

## ವಿರಕ್ತ ತೋಂಟದಾರ್ಯ ಸು. 1560

ಈತನು ಕಾವೇರಿ ಹೇಮಾವತಿಗಳ ನಡುವೆ ಇರುವ ನಂದಿಯಪುರದ ಅರಸನ ಆಶ್ರಯದಲ್ಲಿದ್ದನೆಂದು ಹೇಳಿದೆ. ಈತನಿಗೆ ತೋಂಟದ ಸಿದ್ಧಲಿಂಗ ದೇಶಿಕ ಎಂಬ ಹೆಸರೂ ಉಂಟು. ಇವನ ಗ್ರಂಥಗಳಲ್ಲಿ ನಿರಂಜನಲಿಂಗ ಎಂಬ ಅಂಕಿತವಿದೆ. ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ ವಾಗ್ಗೆಯ ಮಾಯಿ ದೇವಶತಕತ್ರಯ ಟೀಕೆ ಮುಂತಾದ ಗ್ರಂಥಗಳನ್ನೂ ಬರೆದಿದ್ದಾನೆ. ಷಟ್ಸ್ಥಲಾಚಾರ ಸಂಪನ್ನ ಶೈವಪಂಚಾಕ್ಷರೀ ಮಂತ್ರ, ಹೃದಯ ಎಂದು ತನ್ನನ್ನು ಹೇಳಿಕೊಂಡಿದ್ದಾನೆ. ಸೋಮೇಶ್ವರ ಪುರಾಣ ದಲ್ಲಿ ಸಿರಿಯಾಳನ ಉಲ್ಲೇಖವಿದೆ.

## ಷಡಕ್ಷರ ಕವಿ ಸು. 1700

ಕನ್ನಡ ಸಾಹಿತ್ಯದಲಿ ಷಡಕ್ಷರದೇವನು ಉದ್ದಾಮಕವಿ. ಇವನು ವೀರಶೈವ. 'ಶಿವನಂ ತದೀಯ ಶರಣವ್ರಜಮಂ ಬಲಂದದೆ ನುತಿಪೆಂ ನುತಿಸೆನುಲಿದ ಸುರಗಂನರರಂ' ಎಂದು ಸ್ಪಷ್ಟವಾಗಿ ತನ್ನ ಧರ್ಮಾಭಿಮಾನವನ್ನು ಸಾರಿದ್ದಾನೆ. ಉಭಯ ಭಾಷಾ ವಿಶಾರದನಾದ ಇವನು ಕನ್ನಡದಲ್ಲಿ ವೃಷಭೇಂದ್ರ ವಿಜಯ, ಶಬರಶಂಕರ ವಿಲಾಸ ಮತ್ತು ರಾಜಶೇಖರ ವಿಲಾಸ ಎಂಬ ಕಾವ್ಯಗಳನ್ನೂ, ಸಂಸ್ಕೃತದಲ್ಲೂ ಹಲವು ಮತಗ್ರಂಥಗಳನ್ನೂ ರಚಿಸಿದ್ದಾನೆ. ಇವನ ಕಾವ್ಯಗಳ ಶೈಲಿ ಮನೋಹರವಾಗಿದೆ. ಸಿರಿಯಾಳ ಚರಿತ್ರೆಯು ವೃಷಭೇಂದ್ರ ವಿಜಯದಲಿ ಭಕ್ತಿ ಚರಿತ್ರೆ ಎಂಬ ಹೆಸರಿನಿಂದ ಕೇಳಿದೆ.

# ಜಂಗಮ

ಗುರುಶಿಷ್ಯ ಸಮಾರೂಢ ಲಿಂಗ ಮಹಾತ್ಮ್ಯ ಸಂಪದಃ
ಸರ್ವಚಿದ್ರೂಪ ವಿಜ್ಞಾನಾಜ್ಜಂಗ ಮಾಧಿಕ್ಯ ಮುಚ್ಯತೇ
ಜ್ಞಾನಂತ್ಯತಿಶಯಾದ್ಯೇತು ಶಿವಂ ವಿಶ್ವ ಪ್ರಕಾಶಗಂ
ಸ್ವಸ್ವರೂಪ ತಯಾತೇತು ಜಂಗಮಾ ಇತಿಕೀರ್ತಿತಾಃ

ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ
ನಿರ್ಧೂತಮಲ ಸಂಸ್ಪರ್ಶಾಸ್ತೇ ಸ್ಮೃತಾಃ ಶಿವಯೋಗಿನಃ
ಘೋರ ಸಂಸಾರ ತಿಮಿರ ಪರಿಧ್ವಂಸನ ಕಾರಣಂ
ಯೇಷಾಮಸ್ತಿ ಶಿವಜ್ಞಾನಂ ತೇಮತಾಃ ಶಿವಯೋಗಿನಃ

ಜಿತಕಾಮಾ ಜಿತಕ್ರೋಧಾ ಮೋಹಗ್ರಂಥಿ ವಿಭೇದಿನಃ
ಸಮಲೋಷ್ಟಾಶ್ಮಕನಕಾಃ ಸಾಧವಃ ಶಿವಯೋಗಿನಃ
ಸಮಾಃ ಶತ್ರೌ ಚ ಮಿತ್ರೇ ಚ ಸಾಕ್ಷಾತ್ಕೃತ ಶಿವಾತ್ಮಕಾಃ
ನಿಃಸ್ಪೃಹಾ ನಿರಹಂಕಾರಾ ವರ್ತಂತೇ ಶಿವಯೋಗಿನಃ

ದುರ್ಲಭಂ ಹಿ ಶಿವಜ್ಞಾನಂ ದುರ್ಲಭಂ ಶಿವಚಿಂತನಂ
ಯೇಷಾಮೇತತ್ದ್ವಯಂ ಚಾಸ್ತಿ ತೇಹಿ ಸಾಕ್ಷಾಚ್ಛಿವಾತ್ಮಕಾಃ
ಪಾದಾಗ್ರ ರೇಣವೊ ಯತ್ರ ಪತಂತಿ ಶಿವಯೋಗಿನಾಂ
ತದೇವ ಸದನಂ ಪುಣ್ಯಂ ಪಾವನಂ ಗೃಹಮೇಧಿನಾಂ

ಸರ್ವಸಿದ್ಧಿಕರಂ ಪುಂಸಾಂ ದರ್ಶನಂ ಶಿವಯೋಗಿನಾಂ
ಸ್ಪರ್ಶನಂ ಪಾಪಶಮನಂ ಪೂಜನಂ ಮುಕ್ತಿ ಸಾಧನಂ
ಮಹತಾಂ ಶಿವತಾತ್ಪರ್ಯ ವೇದಿನಾಮನು ಮೋದಿನಾಂ
ಕಿಂವಾ ಫಲಂಹಿ ನೋ ಸಿದ್ಧ್ಯೇತ್ ಸಂಪರ್ಕಾಚ್ಛಿವ ಯೋಗಿನಾಂ

—ಸಿದ್ಧಾಂತ ಶಿಖಾಮಣಿ.

ಸರ್ವಲೋಕೋಪಕಾರಾಯ ಯೋದೇವಃ ಪರಮೇಶ್ವರಃ
ಚರತ್ಯಾತಿಥಿ ರೂಪೇಣ ನಮಸ್ತೇ ಜಂಗಮಾತ್ಮನೇ

ಆಗಮ.

x x x x

ಸಮಸ್ತ ಸಂಪತ್ಸುಖಲಾಭ ಮೂಲಂ
ನಿಜ ಪ್ರಭಾವಸ್ತುತಿವೇದ ಜಾಲಂ
ತದ್ವೀರ ಮಾಹೇಶ್ವರ ಸಂಜ್ಞಿಕಾನಾಂ
ಪದಂ ಪ್ರಪದ್ಯೇ ಗುರು ಜಂಗಮಾನಾಂ

ಶ್ರೀಮನ್ಮಹಾ ಶಾಂಭವ ಲಿಂಗದೀಕ್ಷಾ
ಪ್ರಕ್ಷೀಣ ಪಾಶತ್ರಯ ಬಂಧಕಾನಾಂ
ಗಣೇಶ್ವರಾಣಾಂ ಪ್ರಮಥಾಧಿಪಾನಾಂ
ಪದದ್ವಯಂ ಯೋರ್ಚತಿ ಸೋತ್ರಧನ್ಯಃ

ಯೋಭಿಕ್ಷವೇಶ್ರೀ ಪ್ರಮಥಾಧಿಪಾಯ
ಗಣೇಶ್ವರಾಯಾಥ ಮಹೇಶ್ವರಾಯ
ಭಿಕ್ಷಾಂ ಪ್ರದದ್ಯಾದ್ಗುರು ಜಂಗಮಾಯ
ಸವೈಗೃಹೀಧನ್ಯತಮೋನರೇಷು

ಶ್ರೀ ವೀರ ಮಾಹೇಶ್ವರ ಲಿಂಗಸಂಗಿ
ಶ್ರೀಮನ್ನಿರಾಭಾರಿ ಗಣೇಶ್ವರಸ್ಯ
ನಯತ್ರ ಭೀಕ್ಷಾಗುರು ಜಂಗಮಸ್ಯ
ತತ್ರೈವ ದುಃಖಾನ್ಯಪಿ ಪಾತಕಾನಿ

ಪ್ರತ್ಯಕ್ಷ ಶೈವಂ ಚರಮೂರ್ತಿ ರೂಪಂ
ಕಪಾಲಿನಂ ಭಿಕ್ಷು ಮುರು ಪ್ರಭಾವಂ
ಗಣೇಶ್ವರಂ ಜಂಗಮ ಕಲ್ಪವೃಕ್ಷಂ
ಸತ್ಕೃತ್ಯ ಸರ್ವಾರ್ಥ ಸುಖೀ ನರಸ್ಯಾತ್

ಯಜ್ಜಂಗಮಾನಾಂ ಚರಣಾರವಿಂದಂ
ಬಿಭರ್ತಿ ಮೂರ್ಧ್ನಾ ಪರಮೇಶ್ವರೋಪಿ
ತದ್ರೋಣ ಪುಷ್ಪಾಯಿತ ಮಾತ್ಮ ಭಕ್ತ
ಪ್ರಸನ್ನ ಚೇತಾ ನಿಜ ಭಕ್ತ ಭಕ್ತಃ

ಶಿವರಹಸ್ಯ ಪ್ರಕಾಶ.

X X X X

ನರನೆಂಬೆ ನರನಲ್ಲ, ಹರನೆಂಬೆ ಹರನಲ್ಲ,
ನರರೂಪಮಂ ತೋರಿ ಹರನಾಗಿ ನಲಿಯುವನು
ಪರಿಪರಿಯ ಕಷ್ಟಗಳ ಪರಿಹರಿಸಬೇಕೆಂದು
ಸಂಚರಿಪನೀ ಧಾತ್ರಿಯೊಳ್
ಪರುಕಿಸುತ ಲೋಗರಾಚಾರ ಸದ್ಭಕ್ತಿಯನು
ನರಪಾಪ ಪುಣ್ಯಗಳಿಗನುಸರಿಸಿ ಫಲವಿತ್ತು
ಮೆರೆವ ವರಚರ ಮೂರ್ತಿಯಡಿಗಳ್ಗೆ
ಪೊಡಮಡುವೆ ಪರಮ ಸದ್ಭಕ್ತಿಯಿಂದ

---

ಉತ್ತಮ ಮಧ್ಯಮ, ಕನಿಷ್ಟವೆಂದು ಬಂದ ಜಂಗಮವನೆಂದೆನಾದರೆ ನೊಂದೆನಯ್ಯಾ ನಾನು ಬೆಂದೆನಯ್ಯಾ. ಎನ್ನ ಕಿಚ್ಚು ಎನ್ನ ಸುಟ್ಟಿತ್ತು. ಸುಖ ಜಂಗಮ, ಸಾಮಾನ್ಯ ಜಂಗಮವೆಂದುಟೆ ಕೂಡಲ ಸಂಗಮದೇವಾ?

ಎಡದ ಕೈಯಲ್ಲಿ ನಿಗಳವನ್ನಿಕ್ಕಿ, ಬಲ್ಲದ ಕೈಯ್ಯನು ಕಡಿದುಕೊಂಡರೆ, ನೋಯದಿಪ್ಪುದೇನಯ್ಯ? ಪ್ರಾಣ ಒಂದಾಗಿ ದೇಹ ಬೇರಿಲ್ಲ. ಲಿಂಗವ ಪೂಜಿಸಿ, ಜಂಗಮವ ನುದಾಸೀನವ ಮಾಡಿದರೆ, ಬೆಂದೆನಯ್ಯ ನಾನು ಕೂಡಲ ಸಂಗಮದೇವಾ.

ಬೇರೂರಿಂದ ಬಂದ ಜಂಗಮವೇ ಲಿಂಗವೆಂದು ಕಂಡು ಮನೆಯಲ್ಲಿದ್ದ ಜಂಗಮವ ನುದಾಸೀನವ ಮಾಡಿದರೆ, ನಾನು ಬೆಂದೆನಯ್ಯಾ! ನಾನು ಬೆಂದ ಬೇಗೆಯ ನರಿಯೆ ಕಾಣಾ ಕೂಡಲ ಸಂಗಮದೇವಾ.

ಉಟ್ಟುತೊಟ್ಟು ಪೂಜ್ಯನಾಗಿ ಬಂದ ಜಂಗಮವೇ ವಿಶೇಷವೆಂದು ಕಂಡು, ಕಂಥೆ ಬೊಂತೆಯಾಗಿ ಬಂದ ಜಂಗಮವ ಹೀನವೆಂದು ಕಂಡೆನಾದರೆ, ಪಂಚ ಮಹಾ ಪಾತಕ. ಇದು ಕಾರಣ ಜಂಗಮಕ್ಕೆ ಅನ್ನವಸ್ತ್ರ ಧನ ಮಾಟದಲ್ಲಿ ಎರ ಡಾಗಿ ಕಂಡೆನಾದರೆ, ನರಕದಲ್ಲಿಕ್ಕುವ ಕೂಡಲ ಸಂಗಮದೇವಾ.

ಕುದುರೆ ಸತ್ತಿಗೆಯವರ ಕಂಡರೆ ಹೊರಳಿಬಿದ್ದು ಕಾಲ ಹಿಡಿವರಯ್ಯ ಬಡಭಕ್ತರು ಬಂದರೆ ಎಡೆಯಿಲ್ಲ, ಅತ್ತಸನ್ನಿ ಎಂಬರಯ್ಯ! ಎನ್ನೊಡೆಯ ಕೂಡಲ ಸಂಗಯ್ಯನವರು ತಡೆಗೆಡಹಿ ಮೂಗಕೊಯ್ಯದೆ ಮಾಬನೇ?

ಹಾಲು ಕಂದಲು ತುಪ್ಪದ ಮಡಿಕೆಯ ಬೋಡ ಮುಕ್ಕನ ಜೇಡ. ಹಾಲು ಸೀ, ತುಪ್ಪ ಕಮ್ಮಗೆ, ಲಿಂಗಕ್ಕೆ ಬೋನ, ಕೂಡಲ ಸಂಗನ ಶರಣರು ಅಂಗಹೀನರೆಂದರೆ ನಾಯಕ ನರಕ.

ಆರಾಧನೆಯ ಮಾಡಿದರೆ, ಅಮೃತದ ಬೆಳಸು. ವಿರೋಧಿಸಿದರೆ ವಿಷದ ಬೆಳಸು. ಇದುಕಾರಣ ಲಿಂಗ ಜಂಗಮಕೆ ಅಂಜಲೇಬೇಕು. ಸ್ಥಾವರ ಜಂಗಮ ಒಂದೆಂದರಿದರೆ ಕೂಡಲ ಸಂಗಮದೇವ ಶರಣರ ಸನ್ನಿಹಿತ.

ಜಂಗಮವ ನಂಬದೆ, ಬೇರೆಯ ನಂಬೆನು. ಜಂಗಮವ ಕೂಡದೆ ಬೇರೆಯ ಕೂಡೆನು, ಜಂಗಮವ ಬೆರೆಯದೆ ಬೇರೆಯ ಬೆರೆಯೆನು ಜಂಗಮವ ನುಡಿಸದೆ ಬೇರೆಯ ನುಡಿಸೆನು. ಜಂಗಮವ ಲಾಲಿಸದೆ ಬೇರೆಯ ಲಾಲಿಸೆನು. ಜಂಗಮಕೆ ಮಣಿಯದೆ ಬೇರೆಗೆ ಮಣಿಯೆನು; ಜಂಗಮಕೆ ನೀಡದೆ, ಬೇರೆಗೆ ನೀಡೆನು. ಜಂಗಮಕ್ಕೆ ಬೊಗ್ಗದೆ ಬೇರೆಗೆ ಬೊಗ್ಗೆನು. ಪ್ರೊಂಗುತ ನಾನಿಂತು ಪೇಳುವೆ ಪೇಳುವೆ, ಸಿಂಗರದಿಂದ ನೀವು ಮಂಗಳ ಮತಿಗಳು. ನಿಶ್ಚಯ ನಿಶ್ಚ ಯವಿದು, ನಾನೆಂಬೆ, ಕೂಡಲ ಸಂಗಮದೇವಾ ನಿನ್ನನೇ ನಂಬಿರ್ಪೆ.

—ಶ್ರೀ ಬಸವೇಶ್ವರನ ವಚನಗಳು.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 1 | 18 | ಊರ್ಧ | ಊರ್ಧ್ವ |
| 2 | 1 | ಧರ್ಮಗ್ಲಾನಿ | ಧರ್ಮಗ್ಲಾನಿ |
| 3 | 24 | ಕಾವ್ಯಭಾಗಗಳನ್ನು | ಕಾವ್ಯಭಾಗಗಳನ್ನೂ |
| 6 | 18 | ಪರಾಯಿಣೆ | ಪರಾಯಣೆ |
| 7 | 20 | ("ಚೋಳಮಂಡಲದಲ್ಲಿ" ಎಂಬುದನ್ನು ಬಿಟ್ಟು ಓದಿ) | |
| ,, | 25 | ತೇಜಸ್ವಿಯಾಡ | ತೇಜಸ್ವಿಯಾದ |
| 8 | 8 | ಕತೃವೆಂದೂ | ಕರ್ತೃವೆಂದೂ |
| 9 | 21 | ಗಿಡಬಳ್ಳಿ | ಗಿಡಬಳ್ಳಿ |
| 12 | 20 | ತ್ರಿಪುಂಡಾಲಂಕೃತನು | ತ್ರಿಪುಂಡ್ರಾಲಂಕೃತನೂ |
| 13 | 18 | ಹ್ಟುಟಿದನು | ಹುಟ್ಟಿದನು |
| 15 | 10 | ಶೃತಿಗಳ | ಶೃತಿಗಳು |
| 16 | 10 | ಮುಖಾರಾಗ | ಮುಖರಾಗ |
| ,, | 16–17 | ಚಿಲಾಳ | ಚೀಲಾಳ |
| 17 | 23 | ಶಿವಾರ್ಪಣೆ | ಶಿವಾರ್ಪಣೆಗೆ |
| ,, | 13 | "ಜೀವನ್ನಪದ್ರಾಣೆಪಶ್ಯಿತಿ | "ಜೀವನ್ನಪದ್ರಾಣೆಪಶ್ಯತಿ" |
| 19 | 3 | ಅವರನು | ಅವರನ್ನು |
| ,, | ,, | ಮಯಾಮಹಾಯೋಗಿ | ಮಾಯಾಮಹಾಯೋಗಿ |
| 23 | 23 | ನಿಷ್ಠೆತೆಯು | ನಿಷ್ಠೆಯು |
| ,, | 11 | ಮೆಚ್ಚಿವರು | ಮೆಚ್ಚಿದ |
| 27 | 24 | ರುದ್ರಪದವಿಯನ್ನು | ರುದ್ರಲೋಕವನ್ನು |
| 27 | 13 | ಸರ್ವೇಶ್ವರೇಶ್ವರ | ಸರ್ವೇಶ್ವರೇಶ್ವರನ |
| 34 | 7 | ಎಲ್ಲರೂ | ಸಾಮಾನ್ಯವಾಗಿ ಎಲ್ಲರೂ |

| | | | |
|---|---|---|---|
| | 20 | ಶಿಮತ್ತೊಂಡ | ಶಿರುತ್ತೊಂಡ |
| ,, | | ಸಿರಿಯಾಳನ………… | "ಸಿರಿಯಾಳನ ………… |
| ,, | | ಅಭಿಪ್ರಾಯಪಟ್ಟಿರುವರೆಂದು | ಅಭಿಪ್ರಾಯಪಟ್ಟಿರುವರೆಂದು" |
| 35 | 21 | ಬಂದದೆಂದೂ | ಬಂದನೆಂದೂ |
| 36 | 1 | ಬಂದಿದ್ದಾರೆ | ಬರೆದಿದ್ದಾರೆ |
| ,, | 25 | ಬಯ್ಯನೆಂದು | ಒಯ್ದನೆಂದು |
| 37 | 4 | ರಗಳೆ | ತ್ರಿವಿಧಿ |
| 42 | 9 | ಸತ್ವಪರೀಕ್ಷೆವಯಿಂದ | ಸತ್ವಪರೀಕ್ಷೆಯಿಂದ |
| 55 | 24 | ವಡೆದು | ಪಡೆದು |
| 58 | 24 | ವಣಿಕ್ಪ್ರತ್ತಿ | ವೇಣಿಕ್ಸ್ರುತ್ತಿ |
| 59 | 18 | ಶೇಕ್ಕಿಳಾರ್ | ಶೇಕ್ಕಿರಾರ್ |
| 60 | 9 | ತತ್ಪರವಾಗಿದ್ದು | ತತ್ಪರರಾಗಿದ್ದು |
| 61 | 12 | ಮುಡಿಗೆರೆಯ | ಮುಡಿಗೆಯ |
| ,, | 17 | ಬೀಮಕವೀಶ್ವರ | ಭೀಮಕವೀಶ್ವರ |
| 62 | 10 | ಪಟ್ಟಾ | ಷಟ್ಫಾ |
| ,, | 22 | ಬಲಂದದೆ | ಬಲ್ಲಂದದೆ |
| ,, | 28 | ಅಭ್ರಭಕ್ತ | ದಭ್ರಭಕ್ತ |
| 65 | 15 | ಜಂಗಮವೆಂದುಟಿ | ಜಂಗಮವೆಂಮುಂಟಿ |

"ಜಂಗಮ" ಎಂಬ ಭಾಗದಲ್ಲಿ (ಪುಟ 63) ಈ ಶ್ಲೋಕವನ್ನು ಸೇರಿಸಿ ಓದಬೇಕು.

ಶಿಖಾ ಸೂತ್ರಂ ಜಟಾಭಸ್ಮ ದಂಡಾಧಾರೌ ಕಮಂಡಲುಃ
ಆಸನಂ ಧ್ಯಾನ ಭವನ ಮೇವಂ ಜಂಗಮಲಕ್ಷಣಂ ||

(ವೀರಾಗಮ)